# ಒಳಸಂಚು

ಐತಿಹಾಸಿಕ ನಾಟಕ.



ಬಿ. ಎಸ್. ವೆಂಕಟರಾವ್



ಪ್ರಕಾಶಕರು :

ಛಾಯಾ ಪ್ರಕಟನಾಲಯ

ದೇಶಬಂಧು ಪ್ರೆಸ್ : ಕೋಟೆ, ಬೆಂಗಳೂರು ಸಿಟಿ.

# ಮುನ್ನುಡಿ.

---

ಲಲಿತಕಲೆಗಳೂ, ರಂಗಭೂಮಿಯೂ ಮಾನವೀಯ ನುಡಿವಳಿಕೆಯ ಅನಂತರೂಪಗಳು. ಇಂದು ಭಾರತಕ್ಕೆ ಬೇಕಾದುದು ಸತ್ವಾಂಶ. ಪ್ರತಿಯೊಬ್ಬರ ಹೃದಯ ತಂತಿಯನ್ನೂ ಮೀಟಿ, ಅವರ ಸಹಾನುಭೂತಿ ಪಡೆಯಬಲ್ಲ ನೋಟ. ಅಲ್ಲದೆ ಗಾಯಕ, ಕವಿ ಮತ್ತು ರಸಿಕ ಇವರೆಲ್ಲರೂ ಬೇಕು. ತಿಳುವಳಿಕೆಯನ್ನಾಗಲಿ, ಆನಂದವನ್ನಾಗಲಿ, ಸ್ವಾತಂತ್ರ್ಯ ಪ್ರೇಮವನ್ನಾಗಲಿ ಪ್ರತಿಹೃದಯ, ಪ್ರತಿ ಮನೆಗಳಲ್ಲೂ ತುಂಬಬೇಕಾದರೆ ರಂಗಭೂಮಿಯೇ ಅದಕ್ಕೆ ತಕ್ಕ ಸಾಧನ. ರಂಗಭೂಮಿಯು ತನ್ನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು, ಅದು ಜನರಲ್ಲಿ ಉತ್ಕೃಷ್ಟ ಭಾವನೆಗಳನ್ನೂ, ಸ್ವಾತಂತ್ರ್ಯ ಪ್ರೇಮವನ್ನೂ ಉದ್ರೇಕಿಸಲು, ಹಾಗೂ ನಾಳಿನ ಜನರ ಬಾಳಿಗೊಂದು ಸಂದೇಶವನ್ನು ಕೊಡಲು ನಾಟಕಕರ್ತರು ನೆರವಾಗಬೇಕು. ನಾಟಕಕರ್ತನು ದೇಶದ ಸ್ಥಿತಿಗತಿಗಳನ್ನೂ, ವಿವಿಧ ಭಾವನೆಗಳನ್ನೂ ಸುಖದುಃಖದ ಆಂದೋಳನವನ್ನೂ, ಸಮಸ್ಯೆಗೊಂದುತ್ತರವನ್ನೂ ತನ್ನ ರಚನಾಕೌಶಲದಿಂದ, ರಂಗಭೂಮಿಯ ಸಹಾಯದಿಂದ ಜನರ ಮುಂದಿಟ್ಟು ರಂಗಭೂಮಿಯೂ ಒಂದು ವಿಶ್ವವಿದ್ಯಾನಿಲಯವೆಂಬುದನ್ನು ಸ್ಥಿರೀಕರಿಸಬೇಕು. ಗ್ರಂಥಗಳನ್ನೋದಿ, ಅದರಲ್ಲಿ ಮುಖ್ಯವಾಗಿ ಜನತೆಯ ಮತ್ತು ದೇಶದ ಏಳ್ಗೆಗೆ ಏನು ಹೇಳಿದೆಯೆಂದು ತಿಳಿಯುವ ಸೌಭಾಗ್ಯ ಎಲ್ಲರಿಗೂ ಇಲ್ಲ. ಆದರೆ ನಟನ ಧ್ವನಿಗೆ, ಗ್ರಂಥದ ಸಂದೇಶವನ್ನು ಮನಮುಟ್ಟುವಂತೆ ಜನರಿಗೆ ತಿಳಿಸಬಲ್ಲ ಶಕ್ತಿಯಿದೆ. ಮನುಷ್ಯನು ಗುರುತರ ವಿಷಯಗಳನ್ನು ಕುರಿತು ಯೋಚಿಸಲು ಅನುಕೂಲಿಸುವಂತೆ ರಂಗಭೂಮಿಯು ವಿಶ್ವಾನುಭವವನ್ನು ಮಾಡಿಕೊಡುವುದು. ಆದ್ದರಿಂದ ನಾಟಕಕರ್ತರು ಐತಿಹಾಸಿಕ

ವ್ಯಕ್ತಿಗಳ ಸುತ್ತ ಘಟನೆಗಳನ್ನು ಕಲ್ಪಿಸಿ ನಾಟಕರೂಪದಲ್ಲಿ ತಂದು, ಹಿಂದೆ ಹೇಗಿದ್ದಿತೆಂದು ಚಿತ್ರಿಸುವುದರ ಜತೆಗೆ ಮುಂದೆ ಯಾವ ಸುಖ, ಶಾಂತಿ ಸೌಭಾಗ್ಯಗಳು ಬಂದಾವು, ಯಾವುವನ್ನು ನಾವು ಗಳಿಸಬೇಕೆಂಬುದನ್ನೂ, ಹೇಗೆ ಗಳಿಸಬೇಕೆಂಬುದನ್ನೂ ಸನ್ನಿವೇಶಗಳಿಗೆ ಹೊಂದುವಂತೆ ನಿರೂಪಿಸಿ, ರಂಗಭೂಮಿಯ ಮೇಲೆ ತಂದು ಪ್ರೇಕ್ಷಕರ ಭಾವಾವೇಶ, ವಿಚಾರಪರತೆಗಳನ್ನು ಪ್ರಚೋದಿಸಿ ಅವರಲ್ಲಿ ಸ್ವಾತಂತ್ರ ಸ್ಫೂರ್ತಿ ಪ್ರಜ್ವಲಿಸುವಂತೆ ಮಾಡಬಲ್ಲವರಾದರೆ ರಂಗಭೂಮಿಯನ್ನು ಸಾರ್ವಜನಿಕ ವಿಶ್ವವಿದ್ಯಾನಿಲಯವೇ ಏಕೆ ಜನಾದರಣೀಯ ದೇವಾಲಯವನ್ನಾಗಿಯೂಮಾಡಲು ಸಾಧ್ಯ.

ನಾನು ಇದೇ ಧ್ಯೇಯದ ದೃಷ್ಟಿಯಿಂದ ಒಂದೆರಡು ಐತಿಹಾಸಿಕ ಘಟನೆಗಳ ಸುತ್ತ ಈ ನಾಟಕವನ್ನು ಹೆಣೆದಿದ್ದೇನೆ. ನನ್ನ ಉದ್ದೇಶ ವೆಷ್ಟರಮಟ್ಟಿಗೆ ಸಫಲವಾಗಿದೆಯೋ ಅದನ್ನು ಕನ್ನಡಿಗರು ಹೇಳಬೇಕು. ಇದರಲ್ಲಿ ದೋಷಗಳೇನಾದರೂ ಕಂಡುಬಂದಲ್ಲಿ ನಿರ್ದಾಕ್ಷಿಣ್ಯವಾಗಿ ಎತ್ತಿ ಆಡಿಬಿಟ್ಟರೆ ಮುಂದೆ ಅಂತಹ ದೋಷಗಳಾಗದಂತೆ ನೋಡಿಕೊಳ್ಳುವುದು ನನ್ನ ಭಾರ.

136-5ನೇ ರಸ್ತೆ,<br>ಚಾಮರಾಜಪೇಟೆ,<br>ಬೆಂಗಳೂರು ಸಿಟಿ.

**ಬಿ. ಎಸ್. ವೆಂಕಟರಾವ್.**

**ಅರ್ಪಣೆ :**

ತಾಯ್ನಾಡಿನ ಸ್ವಾತಂತ್ರ್ಯ
ಸಾಧಿಸಬಲ್ಲ ಏಕಮಾತ್ರ ಶಕ್ತಿ
ಯುವಜನ ಸ್ಫೂರ್ತಿಗೆ

# ಪಾತ್ರಗಳು

---

| | |
|---|---|
| ನರಹರಿರಾಯ | ವೃದ್ಧ ಜಮೀನ್ದಾರ |
| ವಿಮಲರಾಯ | ನರಹರಿರಾಯನ ಮಗ |
| ಸರ್ವಸುಂದರಿ (ಜುಲೇಖೆ) | ವಿಮಲರಾಯನ ಪತ್ನಿ |
| ಲಲಿತ (ದುಲಾರಿ) | ,, ಮಗಳು |
| ಮೆಹರುನ್ನೀಸ | ಷೇರ್ ಆಫ್ಘನನ ಪತ್ನಿ |
| ಸಮ್ರಾಜ್ಞಿ ನೂರ್‌ಜಹಾನ್ | (ಮೆಹರುನ್ನೀಸಳು) |
| ರಾಣಾ ಕರ್ಣಸಿಂಹ | ಮೇವಾರದ ಮಹಾರಾಣಾ |
| ಭೀಮಸಿಂಹ | ಕರ್ಣಸಿಂಹನ ಸಹೋದರ |
| ಮಹಬತ್‌ಖಾನ್ | ಕಾಬೂಲಿನ ಸುಭೇದಾರ |
| ಜಹಾಂಗೀರ್ | ಮೊಗಲ ಸಮ್ರಾಟ |
| ದಯಾಮಣಿ | ಸರ್ವಸುಂದರಿಯ ನೆಚ್ಚಿನದೂತಿ |

ಅಲ್ಲದೆ ಜಮೇದಾರ, ಸಿಪಾಹಿಗಳು, ಸೇವಕ-ಸೇವಕಿಯರು.

# ಒಳಸಂಚು

## ದೃಶ್ಯ ೧

[ ಕಾಲ:–ಕ್ರಿ.ಶ. ೧೬೦೫. ಸ್ಥಳ–ಬರ್ದ್ವಾನ್. ಪ್ರಸಿದ್ಧ ಜಮೀನ್ದಾರ್ ನರಹರಿರಾಯನ ಅರಮನೆಯಲ್ಲಿ ಒಂದು ಕೊಠಡಿ. ಮಧ್ಯೆ ಸ್ವಲ್ಪ ಎತ್ತರವಾಗಿ ಹಾಕಿರುವ ವಿಶಾಲ ರತ್ನಗಂಬಳಿಯ ಗಾದಿಯಮೇಲೆ ದಿಂಬುಗಳಿಗೊರಗಿ, ವೃದ್ಧ ನರಹರಿರಾಯನೂ, ಅವನ ಮಗ ವಿಮಲರಾಯನೂ, ಸೊಸೆ ಸರ್ವಸುಂದರಿಯೂ ಮೊಗಲರ ಅತ್ಯಾಚಾರದ ಬಗ್ಗೆ ಯೋಚನಾಮಗ್ನರಾಗಿದ್ದಾರೆ. ತೊಡೆಯ ಮೇಲೆ ತಲೆಯಿಟ್ಟು ನಿದ್ರಿಸುತ್ತಿದ್ದ ೯-೧೦ ವರ್ಷದ ಮೊಮ್ಮಗಳು ಲಲಿತಳ ತಲೆ ನೇವರಿಸುತ್ತ ನರಹರಿರಾಯನು, ಆಗಾಗ ಏನೋ ಸಂಶಯದಿಂದ ಚಕಿತನಾಗಿ ಸುತ್ತಲೂ ಒಮ್ಮೆ ನೋಡಿ ಮತ್ತೆ ಯೋಚನಾಮಗ್ನನಾಗುವನು. ವಿಮಲರಾಯನು ಮೆಲ್ಲನೆ ವೃದ್ಧಪಿತನನ್ನುದ್ದೇಶಿಸಿ]

**ವಿಮಲ**—ಹಾಗಾದರೆ ನಮ್ಮವರಾರೂ ದೇಶದ ಹಿತಕ್ಕೆ, ಸ್ವಾತಂತ್ರ್ಯ ಸಾಧನೆಗೆ, ಸ್ವಧರ್ಮರಕ್ಷಣೆಗೆ ಟೊಂಕಕಟ್ಟಿ ನಿಲ್ಲಲಾರರೆಂದೇ ನಿಮ್ಮಭಿಪ್ರಾಯ ?

**ನರಹರಿ**—(ತಲೆದೂಗಿ)....ಎಂದು ರಾಜಾ ಮಾನಸಿಂಹರಂತಹ ಮುಖ್ಯ ಮುಖ್ಯ ರಾಜರುಗಳೇ ತಮ್ಮ ಸ್ವಾತಂತ್ರ್ಯ–ಸ್ವಾಭಿಮಾನಗಳನ್ನೂ, ತಮ್ಮ ಪ್ರಜೆಗಳ ಸೌಖ್ಯವನ್ನು ಬಲಿಗೊಟ್ಟು ಬಾದಷಹನ ಉಚ್ಛಿಷ್ಟದೂಟಕ್ಕೆ–ಅಕ್ಬರನ ಕೃಪಾಲಾಭಕ್ಕೆ ನಾನು–ತಾನೆಂದು ಅತ್ಯಾಸಕ್ತಿಯಿಂದ ಮುಂದೋಡಿದರೋ —ಅಂದೇ ಹಿಂದೂಗಳ ಸರ್ವನಾಶಕ್ಕಾರಂಭವಾಯ್ತು.... ಬೀಹಾರ್, ಬಂಗಾಳ, ಕಾಶ್ಮೀರ, ಸಿಂಧು, ಮಾಳವ, ಗುಜರಾತ್, ಕಾಬೂಲ್ ಕಾಂದಹಾರ್ ಇವೆಲ್ಲ ದೇಶಗಳೂ ಒಂದರ ಹಿಂದೊಂದು ಮೊಗಲರ ಪಾಲಾಗಲು ಬಾದಷಹನಿಗೆ ಯಾರು ಬೆಂಬಲವಾಗಿದ್ದರು ? ...ನಮ್ಮಾತ್ಮೀಯರ ಸ್ವಜನ

ದ್ರೋಹದ ಮಟ್ಟವು ಎಲ್ಲಿಗೇರಿದೆಯೆನ್ನುವುದು ಸ್ಪಷ್ಟವಾಯ್ತೆ ?

**ವಿಮಲ**—ಅಕ್ಬರನು ಸದ್ಗುಣಿಯೆಂದು ಎಲ್ಲೆಲ್ಲೂ ಸುದ್ದಿ ಹರಡುತ್ತಿರುವುದು ನಮ್ಮವರು ಅವನ ಕೃಪಾಛತ್ರದಲ್ಲಡಗಿಕೊಳ್ಳಲು ಓಡುತ್ತಿರುವುದಕ್ಕೆ ಸಹಾಯವಾಗಿದೆ.

**ಸರ್ವಸುಂದರಿ**—ಅಕ್ಬರನು ಒಳ್ಳೆಯವನೇ ಇರಬಹುದು. ಆದರೆ ಅವನ ಅನುಚರರು ?....ಈ ಸುಭೇದಾರರ ಕ್ರೌರ್ಯಕ್ಕೀಡಾಗಿ, ಮಾನಹಾನಿ-ಧರ್ಮಹಾನಿಗಳಿಗೊಳಪಟ್ಟರೂ ಹಿಂದೂಗಳೇಕೆ ಕಣ್ಮುಚ್ಚಿ ಕುಳಿತಿರುವರು ?

**ನರಹರಿ**—(ವ್ಯಂಗವಾಗಿ)........ಹಿಂದೂಗಳು ಶಾಂತಿಪ್ರಿಯರು........ ಅದರಿಂದ.

**ಸರ್ವಸುಂದರಿ**—ಸ್ವಾತಂತ್ರ್ಯವಿಲ್ಲದಿದ್ದರೆ ಹೋಗಲಿ........ಶಾಂತಿಯಾದರೂ ಇದೆಯೆ ?

**ವಿಮಲ**—ಶಾಂತಿ !....ಇಂದು....ಗೋವನ್ನು ಕೊಂದರು.....ನೀರು ತರಲು ಹೋದ ಹೆಂಗಸೊಬ್ಬಳ ಮಾನಭಂಗವಾಯ್ತು.... ಕಾಯಸ್ಥ ಬ್ರಾಹ್ಮಣನ ಗೃಹಕ್ಕೆ ನುಗ್ಗಿ, ರಾಜದ್ರೋಹಿಯೆಂದು ಕುಂಟುನೆವದಿಂದ ಆತನನ್ನು ಬಂಧಿಸಿ, ಆತನ ಪತ್ನಿಯನ್ನು ಷೇರ್ ಅಫ್ಘನನ ಜನಾನೆಯ ದಾಸಿಯಾಗಿ ಒಯ್ದರು....ಇಂಥವನೇಕ ಅತ್ಯಾಚಾರಗಳು ದಿನದಿನಕ್ಕೆ ಹೆಚ್ಚುತ್ತಿವೆ....ಇಷ್ಟಾದರೂ ಹಿಂದೂಗಳು ಶಾಂತಿಪ್ರಿಯರು ........ಬಾವಾಜಿ ಯಾರೆಲ್ಲಾದರೂ ಹೋಗಲಿ........ನನ್ನ ೩೦೦ ಜನ ಯುವಕರೊಡನೆ ಮೊಗಲರನ್ನು ಸದೆಬಡಿಯುತ್ತೇನೆ....ಇದು ಖಂಡಿತ....

**ನರಹರಿ**—ಮೊಗಲರನ್ನು ಒಂದು ಬಾರಿ ನಮ್ಮ ಜಹಗೀರಿನಿಂದಾಚೆ ಇಡುವುದೊಂದೇ ನಮ್ಮ ಗುರಿಯಾದರೆ ೩೦೦ ಯುವಕರು

ಸಾಕಾದೀತು........ಆದರೆ ಮತ್ತೆ ಇರುವೆಗಳಂತೆ ಬಂದು ಮುತ್ತುವ ಬಾದಷಹನ ಸೈನ್ಯಕ್ಕೆ ಇವರು ಎದುರೆ?.... ಅದರಿಂದ ನಿನ್ನವರ ರಕ್ತಪಾತವಾಗುವುದೊಂದೇ ಫಲ.

**ವಿಮಲ**—ಸ್ವಾತಂತ್ರ್ಯಯುದ್ಧದಲ್ಲಿ ೩೦೦ ಏಕೆ ೩೦೦೦ ಜನ ಮಡಿದರೂ ವೃಥಾ ರಕ್ತಪಾತವಾದೀತೆಂದು ಹೆದರಲಾಗದು.

**ನರಹರಿ**—ಬೇಟಾ...........ನೀನು ಹೇಳುವ ೩೦೦೦ ಜನರು ಮುಂದೆ ನುಗ್ಗಿದಾಗ ೩೦೦ ಜನರುರುಳಿದರೆ ನಷ್ಟವಿಲ್ಲ.... ಆದರೀಗ ವಿಮಲ್, ನಿನ್ನ ಹಿಂದಿರುವವರು ಮುನ್ನೂರೇ ಜನರು....ಹಿಂದೂಗಳಲ್ಲೀಗ ಐಕಮತ್ಯವು ನಶಿಸಿಹೋಗಿದೆ. ಒಬ್ಬೊಬ್ಬನೂ ತನ್ನಮಟ್ಟಿಗೆ ತಾನೆಂದಿದ್ದಾನೆ....ಒಮ್ಮೊಗವಾಗಿ, ಒಂದು ಗುರಿಗೆ ಹಿಂದೂಗಳು ಹೋರಾಡುವರೆಂಬುದು ಕನಸಿನ ಮಾತು.

**ವಿಮಲ**—(ಅಸಹ್ಯದಿಂದ) ....ಹೇ....ಡಿ....ಗ....ಳು....

**ಸರ್ವಸುಂದರಿ**—ಅವರಿಗೊಂದೌತಣದೂಟ ಕೊಟ್ಟು ನೋಡಿ........

(ಕ್ಷಣಕಾಲ ಎಲ್ಲರೂ ಮೌನ)

**ವಿಮಲ**—(ತಟ್ಟನೆ) ಪಿತಾಜಿ, ನಮಗೆ ಹಣಸಹಾಯವಿದೆ....ಸೈನ್ಯ ನಿರ್ಮಾಣಮಾಡಿ, ಕಾದುತ್ತ ಮುಂದುವರಿದು ಅಲ್ಲಲ್ಲಿಂದ ಸೈನ್ಯ ಹೆಚ್ಚಿಸಿಕೊಳ್ಳುತ್ತ ಹೋಗೋಣ........ಮೊಗಲರನ್ನು ಪ್ರತಿಭಟಿಸಿ....

**ನರಹರಿ**—ಹಣದಾಸೆಗಾಗಿ ಬರುವ ಹೃದಯರಹಿತ ಜನರ ಗುಂಪೊಂದು ಸೈನ್ಯವಾದೀತೆ ?

**ವಿಮಲ**—ಏಕೆ ಪ್ರಯತ್ನಿಸಬಾರದು ?

**ನರಹರಿ**—ಬೇಟಾ....ಸುಭೇದಾರ ಷೇರ್ ಅಫ್ಘನನು ನನ್ನ ಸರ್ವಸ್ವಾಪಹಾರಕ್ಕೆ ಏನಾದರೂ ನೆವ ಸಿಕ್ಕೀತೇ ಎಂದು ವೈಯೆಲ್ಲ

ಕಣ್ಣಾಗಿ ಕಾಯುತ್ತ ಕುಳಿತಿದ್ದಾನೆ. ನೀನು ಸೈನ್ಯನಿರ್ಮಾಣ ಕಾರ್ಯದಲ್ಲಿ ತೊಡಗಿರುವಾಗ ನಮ್ಮವರೇ ಯಾರಾದರೂ ಹಣದಾಸೆಯಿಂದ ಅವನಿಗೆ ಸುದ್ದಿ ಕೊಡುವರು....ನಿನ್ನ ದ್ವೇಶವು ಕೈಗೂಡುವುದರೊಳಗೇ ನಾವೆಲ್ಲ ಅವನ ಬಂದಿಗಳಾಗಿರುವೆವು....ಆ ಪುರುಷಾರ್ಥಕ್ಕೆ ಇಷ್ಟೆಲ್ಲ ಏಕೆ ಕಷ್ಟ ಪಡಬೇಕು ?

**ವಿಮಲ**—ಹಾಗೆಂದೆಷ್ಟು ದಿನ ಕೈಕಟ್ಟಿ ಕುಳಿತಿರುವುದು ?

**ನರಹರಿ**—ಮೊಗಲರೀಗ ಶಕ್ತಿಯುತರು....ನಾವು ಶಕ್ತಿವಂತರಾಗುವವರೆಗೆ ಕಾಯಬೇಕು.

**ಸರ್ವಸುಂದರಿ**—ಶಕ್ತಿಯನ್ನು ಯುಕ್ತಿಯಿಂದೆದುರಿಸಿ....

**ವಿಮಲ**—ಬಗೆ....?

**ಸರ್ವಸುಂದರಿ**—ಸಲೀಮನು ಮೆಹರುನ್ನೀಸಳಿಗೆ ಮನಸೋತಿರುವನೆಂದಲ್ಲವೇ ಅಕ್ಬರ್ ಬಾದಷಹನವಳನ್ನು ದೂರವಾಗಿಡಲು ಷೇರ್‌ಅಫ್ಘನನಿಗೆ ಮದುವೆ ಮಾಡಿಸಿ, ಅವನಿಗಿಲ್ಲಿಯ ಸುಭೇದಾರಿಯನ್ನು ಕೊಟ್ಟುದು ?

**ನರಹರಿ**—ಅಹುದು ?

**ಸರ್ವಸುಂದರಿ**—ಅದರಿಂದಲೇ ಸಲೀಮನು ದಂಗೆಯೆದ್ದು, ನಂತರ ತನ್ನ ತಂದೆಯ ಪ್ರಾಣಸ್ನೇಹಿತ ಅಬುಲ್‌ಫಸಲನನ್ನು ಕೊಲ್ಲಿಸಿದನೆಂದೂ ನೀವು ಹೇಳಿದ್ದಿರಿ.

**ನರಹರಿ**—ಅಹುದು. ಅದೇ ಕೊರಗಿನಿಂದ ಹಾಸಿಗೆ ಹಿಡಿದ ಬಾದಷಹನು ಈ ಬಾರಿ ಉಳಿಯಲಾರದಂತಹ ವಿಷಮಾವಸ್ಥೆಯಲ್ಲಿರುವನೆಂದು ಇಂದು ಬಂದ ಸುದ್ದಿ.

**ವಿಮಲ**—ಆ ಸುದ್ದಿಗೂ ಪ್ರಕೃತ ವಿಷಯಕ್ಕೂ ಸಂಬಂಧವೇನು ?

**ಸರ್ವಸುಂದರಿ**—....ಅದು ಮುಂದಿನ ಮಾತು.

**ನರಹರಿ**—ಹಾಗಾದರೆ ಇಂದಿನದೇನು ?

**ಸರ್ವಸುಂದರಿ**—ಮಾವನವರನ್ನು ಕಂಡರೆ ಷೇರ್ ಅಫ್ಘನನಿಗಾಗದು....( ಪತಿಯ ಮುಖ ನೋಡುತ್ತ )....ಆದುದರಿಂದ ನೀವು ಅವನ ಮಿತ್ರರಾಗಬೇಕು........ಅದಕ್ಕಾಗಿ ಅವನೆದುರಿನಲ್ಲಿ ನೀವು ತಲೆಬಾಗಬೇಕಾದರೂ ಸಿದ್ಧರಿರಬೇಕು.

**ವಿಮಲ**—(ಕೆರಳಿ) ಏನು ?....ನೀಚ ಮ್ಲೇಚ್ಛನೊಂದಿಗೆ ಮೈತ್ರಿಯೇ? ....ಅದಕ್ಕಾಗಿ ಅವನಿಗೆ ತಲೆಬಾಗಬೇಕೆ ?....ಅದಕ್ಕಿಂತಲೂ ಮೃತ್ಯುವು ನನಗೆ ಹೆಚ್ಚು ಪ್ರಿಯ.

**ಸರ್ವಸುಂದರಿ**—ನಿಮ್ಮ ಸ್ವಾಭಿಮಾನಕ್ಕೆ ದೇಶಹಿತವು ಬಲಿಯೇ ?

**ವಿಮಲ**—(ತಲೆತಗ್ಗಿಸುವನು)

**ಸರ್ವಸುಂದರಿ**—ನೀವವನ ಮಿತ್ರರಾದರೆ ನಾನು ಮೆಹರುನ್ನೀಸಳ ಮೈತ್ರಿಗಳಿಸಲು ಅನುಕೂಲವಾಗುವುದು.

**ವಿಮಲ**—ಈ ಮೈತ್ರಿಯಿಂದಾಗುವ ದೇಶಹಿತಗಳೇನೇನು ?

**ಸರ್ವಸುಂದರಿ**—ಎಲ್ಲವೂ ಆಗಬಹುದು ಇಲ್ಲವೇ ಏನೂ ಆಗದಿರಬಹುದು....ಸಮುದ್ರದಾಚೆದಡದಲ್ಲೇನಿದೆ ಎನ್ನುವುದನ್ನು ಈಗಲಿಂದೇಕೆ ಯೋಚಿಸಬೇಕು. ಮೊದಲು ಹಡಗಿನಿಂದ ದಾಟಲೆತ್ನಿಸೋಣ....

**ನರಹರಿ**—(ವಿಸ್ಮಯಗೊಂಡು ತಲೆದೂಗುತ್ತ)....ಬುಡಕ್ಕೆ ಕೊಡಲಿಯ ಗುರಿಯಿಟ್ಟಿರುವೆ ಬೇಟೀ....ನಿನ್ನ ಪ್ರಯತ್ನವು ಫಲಕಾರಿಯಾಗಲೆಂದು ಆಶಿಸುತ್ತೇನೆ........

[ ಆ ವೇಳೆಗೆ ಹಿಂದೆ ಗೋಡೆಯಿಂದ ಸಾಂಕೇತಿಕ ಸೂಚನೆಯು ಕೇಳಿಬರುವುದು. ವಿಮಲರಾಯನೂ-ಸರ್ವಸುಂದರಿಯೂ ಚಕಿತರಾಗಿ ನರಹರಿರಾಯನ ಮುಖವನ್ನು ನೋಡುವರು. ನರಹರಿರಾಯನು ಮೊಮ್ಮಗಳ ತಲೆ

ಯನ್ನು ಎಚ್ಚರಿಕೆಯಿಂದ ತೊಡೆಯಿಂದಿಳಿಸಿ, ಎದ್ದು ಹೋಗಿ ಗೋಡೆಯ ಮೇಲೆ ಒಂದು ನಿರ್ದಿಷ್ಟ ಸ್ಥಾನದಲ್ಲಿ ತನ್ನ ಸೊಂಟದಲ್ಲಿದ್ದ ಕೃಪಾಣದ ಹಿಡಿಯಿಂದ ಮೂರು ಬಾರಿ ಕುಟ್ಟಿ ಉತ್ತರ ಕೊಡುವನು. ಕೂಡಲೆ ಆ ಸ್ಥಳದಲ್ಲಿದ್ದ ಗುಪ್ತದ್ವಾರವು ತೆರೆದು ಒಬ್ಬ ವೃದ್ಧನೂ ಒಬ್ಬ ಯುವಕನೂ ಸರ್ವಸುಂದರಿಯ ತಮ್ಮ ನಿರಂಜನನ ಕಳೇಬರವನ್ನು ಹೊತ್ತು ತಂದು ಎಲ್ಲರೆದುರಿನಲ್ಲಿ ನೆಲದ ಮೇಲೆ ಮಲಗಿಸಿ ತಲೆಬಾಗಲು ಎಲ್ಲರೂ ಎದ್ದು ಶವಪರೀಕ್ಷೆಗೆ ನಿಲ್ಲುವರು. ನರಹರಿರಾಯನು ಬೆಚ್ಚಿ 'ನಿ–ರಂ–ಜ–ನ' ಎಂದು ಸರ್ವಸುಂದರಿಯ ಮುಖ ನೋಡುವನು. ವಿಮಲರಾಯನು ಕ್ರೋಧದಿಂದ ಸಂತಪ್ತನಾಗುವನು. ಸರ್ವಸುಂದರಿ ಕಂಬನಿದುಂಬಿ, ಬಿಳುಪೇರಿದ ಮುಖದೊಡನೆ ಮೆಲ್ಲನೆ ಶವದಬಳಿ ಕುಳಿತು, ರಕ್ತಸಿಕ್ತವಾಗಿದ್ದ ಮುಖವನ್ನು ತನ್ನ ಸೆರಗಿನಿಂದ ಒರೆಸಿ, ಒಂದು ಕ್ಷಣ ಎವೆಯಿಕ್ಕದೆ ನೋಡಿ, ಅನಂತರ ಮೆಲ್ಲನೆ ತಲೆತಿರುಗಿಸಿ ವಕ್ಷಸ್ಥಲದಲ್ಲಾಗಿದ್ದ ಖಡ್ಗದಿರಿತದ ಗುರುತನ್ನೂ ಗಮನಿಸಿ, ಕಣ್ಣೀರೊರಸಿಕೊಂಡು, ಮೆಲ್ಲನೆ ತಲೆಯೆತ್ತಿ ವೃದ್ಧನ ಮುಖವನ್ನು ನೋಡುವಳು. ವೃದ್ಧನಾನೋಟದ ಇಂಗಿತವರಿತು]

**ವೃದ್ಧ**—(ತನ್ನ ಭಾವನೆಗಳನ್ನು ಕಷ್ಟಪಟ್ಟು ಹತೋಟಿಯುಲ್ಲಿಟ್ಟುಕೊಳ್ಳಲೆತ್ನಿಸುತ್ತ)....ಮಾತೃ ಮಂದಿರದ ಬಳಿ........ಗೋ ಪೂಜೆ ಮಾಡುತ್ತಿದ್ದ ಕಾಯಸ್ಥ ಸ್ತ್ರೀಯೊಬ್ಬಳು....ಸುಭೇದಾರನ ಸಿಪಾಯಿಗಳ ಅತ್ಯಾಚಾರಕ್ಕೆ ಸಿಕ್ಕಿಬಿದ್ದಳು........ಆಗ ಸಮೀಪದಲ್ಲೇ ತಮ್ಮ ತಮ್ಮಂದಿರು ಅಶ್ವಾರೂಢರಾಗಿ ಹೋಗುತ್ತಿದ್ದವರು ಅದನ್ನು ಕಂಡು........ಸೈನಿಕರನ್ನು ಶಿಕ್ಷಿಸಲು....ಇಳಿದು ಹೋದರು....(ನರಹರಿರಾಯನ ಕಡೆ ನೋಡುತ್ತ, ಶವದ ಮೇಲಿನ ಇರಿತದ ಗಾಯದ ಕಡೆ ಕೈತೋರಿ) ....ಇದು ತಮ್ಮ ಸೇವಕನೊಬ್ಬನ ಸ್ವಾಮಿಭಕ್ತಿಯ ಗುರ್ತು.

**ನರಹರಿ**—(ಕ್ಷಣಕಾಲ ಯೋಚಿಸಿ, ನಿಧಾನವಾಗಿ)....ನಿರಂಜನಬಾಬುವಿನ ಮೇಲೇನಾದರೂ ಅವನಿಗೆ ದ್ವೇಷವಿತ್ತೆ?

**ವೃದ್ಧ**—ದ್ವೇಷವೆ ಶ್ರೀಮನ್ ?..... (ತಲೆಯಾಡಿಸಿ) .....ಇದು....ಹಣದಾಸೆಗೆ....ಬಲಿ....

[ ನರಹರಿರಾಯನು ಮಗನ ಮುಖ ನೋಡುವನು. ವಿಮಲರಾಯನು ಮತ್ತಷ್ಟು ಕೆರಳಿ ]

**ವಿಮಲ**—ನಾನಿನ್ನು ಕೈಕಟ್ಟಿ ಕುಳಿತಿರಲಾರೆ ಪಿತಾಜಿ........ನನ್ನ ೩೦೦ ಜನರಲ್ಲಿ ಕೊನೆಯವನಾಗೊಬ್ಬನು ಉಳಿದರೂ ನಾನು ಮಡಿಯುವವರೆಗೂ ಮೊಗಲರೊಡನೆ ಹೋರಾಡುವೆನು (ಎಂದು ಗಾದಿಯಮೇಲಿಪ್ಪ ತನ್ನ ಖಡ್ಗವನ್ನು ತೆಗೆದುಕೊಳ್ಳಲು ಹೋಗುವನು. ನರಹರಿರಾಯನು ಹುಬ್ಬು ಗಂಟಿಕ್ಕಿ ಮಗನ ಭುಜ ಹಿಡಿದು ನಿಲ್ಲಿಸಿ)

**ನರಹರಿ**—....ಬೇ....ಟಾ.... ? ....(ಮೆಲ್ಲನೆ)....ಗೋಡೆಗಳಿಗೂ ಕಿವಿಯುಂಟು....ದುಡುಕಿ ಏನೂ ನುಡಿಯದಿರು.

[ ಆ ವೇಳೆಗೆ ಹೊರಗಿನಿಂದ “ಬಾದಷಹನ ಆಜ್ಞೆಯಾಗಿದೆ...ಬಾಗಿಲು ತೆರೆಯಿರಿ” ಎಂದು ಕೋಣೆಯ ದ್ವಾರವನ್ನು ಒಂದೇಸವನೆ ದಡದಡ ಕುಟ್ಟುವುದು ಕೇಳಿ ಬರುವುದು. ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುವರು. ]

**ನರಹರಿ**—(ವೃದ್ಧನನ್ನು ಕರಿತು)........ನಿಮ್ಮನ್ನಾರಾದರೂ ಹಿಂಬಾಲಿಸಿದರೆ ?

**ವೃದ್ಧ**—(ತಲೆಯಾಡಿಸಿ) ನಾನು ಆದಷ್ಟೂ ಎಚ್ಚರಿಕೆಯಿಂದ ಬಂದೆ....

[ ನರಹರಿರಾಯನು ವೃದ್ಧನಿಗೆ ಶವವನ್ನು ಗುಪ್ತದ್ವಾರದಿಂದ ಹೊರಕ್ಕೆ ಸಾಗಿಸಲು ಕೈಯಿಂದ ಸೂಚಿಸುವನು. ವೃದ್ಧನು ಹೊರಗಿಟ್ಟು ಬರುವನು. ]

**ನರಹರಿ**—(ಯೋಚಿಸುತ್ತ, ತನ್ನಲ್ಲಿ)....ಈ ಪ್ರಸಂಗ ಎಂದು ಬಂದರೂ ಬರಬಹುದೆಂದು ಸಿದ್ಧನಾಗಿದ್ದೆ....ಕೊನೆಗಿಂದು ಬಂದೇ ಬಂದಿತು....ಚಿಂತೆಯಿಲ್ಲ.... (ಮಗನನುದ್ದೇಶಿಸಿ) ....ವಿಮಲ್ ....ನೀನು ಲಲಿತ–ಸರ್ವಸುಂದರಿಯರೊಡನೆ ಗುಪ್ತದ್ವಾರದ ಮೂಲಕ ಸುರಂಗದಿಂದ ಕಿಲ್ಲೆಯಾಚೆ ಹೊರಟು ನನಗಾಗಿ ಕಾದಿರಿ....ನೀವು ಸುರಂಗದಲ್ಲಿ ಸ್ವಲ್ಪ ಹಾದಿ ದಾಟಿದಮೇಲೆ

........ನಮ್ಮನ್ನಾರೂ ಹಿಂದಟ್ಟಿ ಬರಲವಕಾಶವಿಲ್ಲದಂತೆ ಸುರಂಗದ್ವಾರವನ್ನು ಮುಚ್ಚಿಟ್ಟು ಹಾರಿಸಿ, ಬರುತ್ತೇನೆ.... (ವೃದ್ಧನನ್ನುದ್ದೇಶಿಸಿ) ....ನಾನು ಬರದಿದ್ದರೆ ನೀನು ಮಾಡ ಬೇಕಾದ ಕರ್ತವ್ಯ ನೆನಪಿದೆಯಷ್ಟೆ? (ವೃದ್ಧನು ತಲೆದೂಗು ವನು)....ಹೂಂ ಹೊರಡಿ.

**ವಿಮಲ**—ಇಲ್ಲ ಪಿತಾಜೀ....ನೀವು ಇವರೆಲ್ಲರೊಡನೆ ಹೋಗಿ.... ನಿಮ್ಮ ಕಾರ್ಯ ನಾನು ಮುಗಿಸಿ ಬರುತ್ತೇನೆ....

**ನರಹರಿ**—ಇಬ್ಬರಲ್ಲೊಬ್ಬರು ಸೋಲಬೇಕು....ಚರ್ಚೆಗೆ ಸಮಯವಿಲ್ಲ ....ಅವರಾಗಲೇ ಬಾಗಿಲನ್ನೊಡೆಯಲಾರಂಭಿಸಿದರು.

**ಸರ್ವಸುಂದರಿ**—(ಮಲಗಿದ್ದ ಮಗಳನ್ನು ಎಚ್ಚರಿಸಿ ಮುದ್ದಿಟ್ಟು).... ಪಿತಾಜೀ....ಲಲಿತಳನ್ನು ನೀವು ಕರೆದೊಯ್ಯಿರಿ....ನಾನಿವ ರೊಡನೆ ಬರುವೆನು....(ಎಂದು ಪತಿಯ ಬಳಿ ನಿಲ್ಲುವಳು)

[ ನರಹರಿರಾಯನು ಲಲಿತಳನ್ನು ಮುಂದೆ ಗುಪ್ತಮಾರ್ಗದಿಂದಾಚೆ ಬಿಟ್ಟು ತಾನೂ ಹಿಂಬಾಲಿಸುವ ವೇಳೆಗೆ ದೂರ ನಿಂತಿದ್ದ ತರುಣ ಭೃತ್ಯನು ಸರ್‍ರನೆ ತನ್ನ ಗುಪ್ತ ಕಠಾರಿಯಿಂದ ನರಹರಿರಾಯನನ್ನಿರಿಯಲು ಹೋದಾಗ ಮಿಂಚಿನಂತೆ ವಿಮಲರಾಯನು ಹಾರಿ ಅಡ್ಡವಾಗಲು, ಕಠಾರಿಯು ವಿಮಲ ರಾಯನ ಹೃದಯದಲ್ಲಿ ವಿಶ್ರಮಿಸುವುದು. ವಿಮಲರಾಯನು ಕೆಳಗುರುಳು ವನು. ಗುಪ್ತದ್ವಾರವೂ ಮುಚ್ಚಿಕೊಳ್ಳುವುದು. ವೃದ್ಧಭೃತ್ಯನು ಕ್ರೋಧ ದಿಂದ ಕುದಿಯುತ್ತ ಯುವಕನನ್ನು ಹಿಡಿದೆತ್ತಿ ನೆಲಕ್ಕೆ ಕುಕ್ಕುವನು. ಆ ಗಲಿ ಬಿಲಿಯಲ್ಲಿ ವೃದ್ಧನ ಗಡ್ಡ—ಮೀಸೆಗಳು ಕಳಚಿ ಬಿದ್ದು ಅವನ ಸುಂದರ ರೂಪು —ತಾರುಣ್ಯಗಳು ಬಯಲಾಗುವುವು. ಅವನ ಹಿಡಿತಕ್ಕೆ ಸಿಕ್ಕಿ ಕೆಳಗೆ ಬಿದ್ದಿದ್ದ ಯುವಕನು ಬೆದರಿ....'ರಾಣಾ ಕರ್ಣಸಿಂಹ' ಎಂದು ಗುರ್ತಿಸುತ್ತಲೇ....ಕರ್ಣ ಸಿಂಹನು....'ದ್ರೋಹೀ' ಎಂದು ತನ್ನ ಕೃಪಾಣಕ್ಕೆ ಯುವಕನ ರಕ್ತದ ಸವಿಗಾಣಿಸುವನು. ಇವೆಲ್ಲ ಘೋರ ಪ್ರಸಂಗಗಳಿಂದ ಸ್ತಂಭಿತಳಾಗಿ ಸರ್ವ ಸುಂದರಿಯು ಮೆಲ್ಲನೆ ಕುಳಿತು, ಪತಿಯ ತಲೆಯನ್ನು ತೊಡೆಯಮೇಲಿರಿಸಿ ಕೊಂಡು ಶೂನ್ಯವನ್ನೀಕ್ಷಿಸುತ್ತ ಕೂಡುವಳು....ಕರ್ಣಸಿಂಹನು ಮತ್ತೆ ವೃದ್ಧ ನಾಗುವನು. ]

**ವೃದ್ಧ**—ತಾಯಿ....ದ್ವಾರವು ಮುರಿದು ಬೀಳುವ ಸ್ಥಿತಿಯಲ್ಲಿದೆ.... ಬೇಗ ಕದಲಬೇಕು....

**ಸರ್ವಸುಂದರಿ**—ದ್ವಾರ ಮುರಿದವರು ಬರಲಿ. ನಾನವರ ಬಂದಿಯಾಗಿ ಹೊರಡುವೆನು....

**ವೃದ್ಧ**—ತಾಯೀ ?....ಮೊಗಲರ....

**ಸರ್ವಸುಂದರಿ**—ನನ್ನ ರಕ್ಷಣೆಯ ಗೊಡವೆ ನಿಮಗೆ ಬೇಡ. ದೇಶದ ಹಿತಕ್ಕೆ ಬಲಿಯಾಗಲು ಸಿದ್ಧರಿರುವಿರೇನು....

**ವೃದ್ಧ**—ತಾಯಿ....ನಾನು ರಜಪೂತನು....

**ಸರ್ವಸುಂದರಿ**—ನಾನು ಮೆಹರುನ್ನೀಸಳೊಂದಿಗಿರುತ್ತೇನೆ....ಅಲ್ಲಿ ನನ್ನ ಸಮೀಪದಲ್ಲಿ ನಿಮ್ಮವರೊಬ್ಬರಿರಲಿ........ನಾನು ಕೊಡುವ ಸೂಚನೆಯಂತೆ ಚಾಚೂ ತಪ್ಪದೆ ನಡೆಯುವೆನೆಂದು ದೇವಿಯ ಆಣೆಯಿಟ್ಟು ನುಡಿಯಿರಿ....

**ವೃದ್ಧ**—ದೇಶಸೇವೆಗೆ ನಿಮ್ಮಾಜ್ಞೆಯಾದರೆ ಮಡಿಯಲೂ ನಾನು ಸಿದ್ಧನಿದ್ದೇನೆಂದು ತ್ರಿಕರಣಪೂರ್ವಕವಾಗಿ ದೇವಿಯ ಮೇಲಿನಾಣೆಯಿಟ್ಟು ಹೇಳುತ್ತೇನೆ....

**ಸರ್ವಸುಂದರಿ**—....ನೆನಪಿರಲಿ....ಹೊರಡಿ....

[ ವೃದ್ಧನು ಗುಪ್ತದ್ವಾರದ ಮೂಲಕ ಮರೆಯಾಗುವನು. ದ್ವಾರವೊಡೆದು ಸುಭೇದಾರನ ಸೈನಿಕರು ಒಳಗೆ ಪ್ರವೇಶಿಸಿ, ಅಲ್ಲಿನ ದೃಶ್ಯವನ್ನು ಕಂಡು ಬೆರಗಾಗಿ ನಿಲ್ಲುವರು. ಅವರ ಮುಖಂಡನು ಚೇತರಿಸಿಕೊಂಡು ತಲೆಬಾಗಲು, ಸರ್ವಸುಂದರಿಯು ಕೊನೆಯಬಾರಿ ಪತಿಯ ಮುಖ ನೋಡಿ, ತಲೆಯನ್ನು ಮತ್ತೆ ನೆಲಕ್ಕಿಳಿಸಿ, ಮೆಲ್ಲನೆದ್ದು ನಿಧಾನವಾಗಿ ಗಂಭೀರ ನಡಿಗೆಯಲ್ಲಿ ಹೊರ ಹೊರಡಲು, ಜಮೇದಾರನು ತಮ್ಮಲ್ಲೊಬ್ಬನಿಗೆ ಅಲ್ಲೇ ಇದ್ದು ಶವಗಳನ್ನು ಕಾಯ್ದು ಕುಳಿತಿರಬೇಕೆಂದು ಸೂಚಿಸಿ, ಉಳಿದವರೊಡನೆ ಸರ್ವಸುಂದರಿಯನ್ನು ಹಿಂಬಾಲಿಸುವನು.

ಓಂದುಳಿದ ಸಿಪಾಯಿಯು ಅತ್ತಿತ್ತ ಒಂದೆರಡು ಬಾರಿ ಸುತ್ತಿ, ಬೇಸರಗೊಂಡು ಗಾದಿಯಮೇಲೆ ಮಲಗಿ ವಿಶ್ರಮಿಸಿಕೊಳ್ಳುತ್ತಿರಲು, ಗುಪ್ತದ್ವಾರದಿಂದ ವೃದ್ಧನು ಸದ್ದಿಲ್ಲದೆ ಪ್ರವೇಶಿಸಿ, ತನ್ನ ಕೃಪಾಣದಿಂದ ಸಿಪಾಯಿಯನ್ನಿರಿದು ಕೊಂದು, ವಿಮಲರಾಯನ ಶವವನ್ನು ಗುಪ್ತಮಾರ್ಗದಿಂದಲೇ ಹೊರಕ್ಕೆ ಸಾಗಿಸಿಕೊಂಡು ಹೋಗುವನು. ಏನೋ ಹೇಳಲು ಮರೆತ ಜಮೇದಾರನು ಹಿಂತಿರುಗಿ ಬಂದು, ತನ್ನ ಕಡೆಯ ಸಿಪಾಯಿ ಸತ್ತಿರುವುದನ್ನೂ, ವಿಮಲರಾಯನ ಶವವಿಲ್ಲದಿರುವುದನ್ನೂ ಕಂಡು ಕಂಗಾಲಾಗಿ ನಡಗುತ್ತ "ಯಾ....ಅಲ್ಲ....ತೋಬಾ ತೋಬಾ" ಎಂದು ತನ್ನ ಕುತ್ತಿಗೆಯನ್ನು ಮುಟ್ಟಿನೋಡಿಕೊಳ್ಳುತ್ತ ಓಡುವನು.]

ತೆರೆ

---

# ಎರಡನೆಯ ಅಂಕ

---

## ದೃಶ್ಯ ೧

[ ಕಾಲ—ಕ್ರಿ. ಶ. ೧೬೧೧. ಸ್ಥಳ—ಷೇರ್‌ಅಫ್ಘನನ ಜನಾನೆಗೆ ಸೇರಿದ ಉಪವನದ ದಾರಿಯಲ್ಲಿ...ಮೆಹರುನ್ನೀಸಳು ಸರ್ವಸುಂದರಿಯೊಡನೆ ಮಾತನಾಡುತ್ತ ನಡೆದಿದ್ದಾಳೆ. (ಸರ್ವಸುಂದರಿಯು ಈ ವೇಳೆಗೆ ಬಲಾತ್ಕಾರದಿಂದ ಮತಭ್ರಷ್ಟೆಯಾಗಿದ್ದರೂ, ಮೆಹರುನ್ನೀಸಳ ಮೈತ್ರಿಯ ಬಲದಿಂದ ತನ್ನ ಸತೀತ್ವವನ್ನುಳಿಸಿಕೊಂಡು ಹಿಂದೂಧರ್ಮದಾಚರಣೆಗನುಸಾರವಾಗಿ ಅವಳೊಡನೆ ಜೀವಿಸುತ್ತಿದ್ದು, ತನ್ನ ಕಾರ್ಯ ಸಾಧನೆಯ ಗುರಿಯನ್ನು ಗೋಪ್ಯವಾಗಿಟ್ಟುಕೊಂಡು, ಮೆಹರುನ್ನೀಸಳು ತನ್ನೊಡನೆ ಗುರುತರ ಕಾರ್ಯಗಳನ್ನು ಪರ್ಯಾಲೋಚಿಸುವಾಗ ಸೂಕ್ತ ಸಲಹೆಗಳನ್ನು ಕೊಡುವುದರಿಂದ ಅವಳ ಅಪೂರ್ವ ಪ್ರೇಮಕ್ಕೆ ಮೈತ್ರಿಗೆ ಪಾತ್ರಳಾಗಿರುತ್ತಾಳೆ]

**ಮೆಹರುನ್ನೀಸಾ**—....ಸರ್ವಸುಂದರಿ....ಏನು ಯೋಚಿಸುತ್ತಿರುವೆ ?

**ಜುಲೇಖಾ**—ಮೆಹರ್........ಸರ್ವಸುಂದರಿಯು ಆರು ವರ್ಷಗಳ ಹಿಂದೆಯೇ ಸತ್ತಳು....ಮತ್ತೆ ಮತ್ತೆ ಆ ಹೆಸರನ್ನುಚ್ಚರಿಸುವೆ ಏಕೆ?..ಈಗ ನಿನ್ನೊಂದಿಗಿರುವಳು ಜುಲೇಖೆ....ಸರ್ವಸುಂದರಿಯಲ್ಲ....(ಮೆಹರಳ ಕೈಹಿಡಿದೊತ್ತಿ)........ನಾನು ಮರೆತುದೆಲ್ಲ ಆ ಹೆಸರೆತ್ತಿ ಜ್ಞಾಪಿಸುವುದಿಲ್ಲವೆಂದು ಮಾತುಕೊಡು.... ಮೆಹರ್....(ಎಂದು ದೈನ್ಯದಷ್ಟಿಯಿಂದ ಮೆಹರುನ್ನೀಸಳನ್ನು ನೋಡುವಳು. ಮೆಹರಳು ಮೆಲುನಗೆ ನಕ್ಕು, ಆಗಲೆನ್ನುವಂತೆ ಮೆಲ್ಲನೆ ತಲೆದೂಗಿ ಒಂದು ಕ್ಷಣ ಮೌನದಿಂದಿದ್ದು, ಅನಂತರ) ...

**ಮೆಹರ್**—ಪರಿಸ್ಥಿತಿಗನುಕೂಲವಾಗಿ ಹೊಂದಿಕೊಂಡು ಹೋಗುವ ನಿನ್ನ ಗುಣಕ್ಕೆ ನಾನು ಸೋತಿದ್ದೇನೆ....ಜುಲೇಖಾ.... ಆದರೆ....

**ಜುಲೇಖಾ**—ಆದರೇನು....?

**ಮೆಹರ್**—ಎಂದಾದರೂ ಒಂದೊಂದು ದಿನ ಹಿಂದಿನ ನೆನಪಾಗಿ, ಸಮಯ ಸಿಕ್ಕಿದರೆ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಮನಸ್ಸಾಗದೆ....ನಿನಗೆ....?

**ಜುಲೇಖಾ**—(ತಲೆಯಾಡಿಸಿ) ನಾನು ಹಿಂದೂ ಹೆಂಗಸು........ನಾವು ಹುಟ್ಟುವಾಗಲೇ ವೈರಾಗ್ಯವನ್ನು ಜೊತೆಯಲ್ಲಿ ತರುವೆವು.... ಎಷ್ಟೇ ಕಷ್ಟ ಬಂದರೂ, ಕೆಡುಕಾದರೂ ಅವನ್ನೆಲ್ಲ ಸಹಿಸಲು ಮರೆಯಲು ನಮಗೆ ಆ ವೈರಾಗ್ಯವು ನೆರವಾಗುವುದು.... ಹಾಗೆ ಮರೆಯದಿದ್ದರೆ ಹೆಣ್ಣಾಗಿ ಹುಟ್ಟಿರುವಾಗ ಏನುತಾನೆ ಮಾಡಲು ಸಾಧ್ಯವಾದೀತು?.... ಹಿಂದೆ ಆನುದನ್ನು ವೃಥಾ ಮನಸ್ಸಿಟ್ಟುಕೊಂಡು ಕೈಸಾಗದೆ ಕೊರಗುವುದಕ್ಕಿಂತಲೂ ಮರೆಯುವುದೇ ಲೇಸು....ಈಗ ನೀನಾದರೂ ಹಿಂದಿನದನ್ನು ಮರೆಯಲಿಲ್ಲವೇ?....

**ಮೆಹರ್**—(ಹುಬ್ಬು ಗಂಟಿಕ್ಕಿ—ಹಲ್ಲು ಕಡಿಯುತ್ತ)....ನಾನು ಮರೆಯುವುದೇ....?....ಇಲ್ಲ....ಮೊಗಲರಿಂದ ಪಾಲಿತಳಾದಾಕ್ಷಣವೇ ನಾನೂ ಮೊಗಲರಂತೆ ವಿಷಯಾಭಿಲಾಷೆಗೆ ತುತ್ತಾಗಿ ನನ್ನಾತ್ಮಗೌರವವನ್ನು ಕಳೆದುಕೊಂಡಿರುವೆನೆಂದು ತಿಳಿದೆಯಾ ಜುಲೇಖಾ?....ನನ್ನ ದೇಹದಲ್ಲಿ ಹರಿಯುತ್ತಿರುವುದು ಪಾರಸೀ ರಕ್ತ........ಪಾರಸೀಕಳು ತನ್ನಪಮಾನವನ್ನೆಂದಿಗೂ ಮರೆಯಳು........ಪ್ರತಿದಿನವೂ ಅದನ್ನು ನೆನೆನೆನೆದು ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿರುವೆನು....

**ಜುಲೇಖಾ**—ಅಂತಹುದೇನಾಯ್ತು?

**ಮೆಹರ್**—ಏನಾಯ್ತು?....ಏನಾಗದೇ ಉಳಿಯಿತೆನ್ನು........ಆಗ್ರದ ಅರಮನೆಯ ಬಾಂದಿಗಳ ಹಾಸ್ಯಕ್ಕೀಡಾದುದಕ್ಕಿಂತಲೂ ಇನ್ನು ಅಪಮಾನವುಂಟೆ?

**ಜುಲೇಖಾ**---ಅದಕ್ಕಿಂತಲೂ ಸಾವು ಸಾವಿರಪಾಲು ಸುಖ.

**ಮೆಹರ್**-- ....(ಶೂನ್ಯವನ್ನೀಕ್ಷಿಸುತ್ತ) ಸೆಲೀಮನನ್ನು ನಾನಾಗಿ ಮೋಹಿಸಲಿಲ್ಲ....ನಿನ್ನ ಸತೀತ್ವವು ನಿನಗೆಷ್ಟು ಪ್ರಿಯವೋ ನನಗೂ ಅಷ್ಟೇ ಪ್ರಿಯವಾಗಿತ್ತು....ನನ್ನನ್ನು ವಿವಾಹ ವಾದಲ್ಲದೆ ನಾನು ಅವನಿಗೆ ಸೋಲೆನೆಂದು ಖಚಿತವಾಗಿ ಹೇಳಿದ್ದೆ........ವಿವಾಹವಾಗುವೆನೆಂದು ವಚನಕೊಟ್ಟು ಹಿಂಸಿಸಿದ.... (ಹಲ್ಲು ಕಡಿದು) ....ಕೊನೆಗೆ ಸೋತೆ....ಇದು ಹೇಗೋ ಅಕ್ಬರ್ ಬಾದಷಹನ ಕಿವಿಗೆ ಬಿದ್ದಿತು. ನನ್ನನ್ನು ಕರೆಸಿ....ಎಲ್ಲವನ್ನೂ ಮತ್ತೆ ನನ್ನ ಬಾಯಿಂದಲೇ ಕೇಳಿ.... ಏನಂದನು ತಿಳಿಯುವುದೆ ?........(ಜವಸಿಕೆಯಂಚನ್ನು ಕೈಗೆ ಸುತ್ತುತ್ತ) ....ಹಿಂದೂಸ್ಥಾನದ ಭಾವೀಸಮ್ರಾಟನು ತನ್ನ ಯೋಗ್ಯತೆಗೆ ತಕ್ಕ ರಾಜಕನ್ಯೆಯನ್ನು ವರಿಸಬೇಕೇ ವಿನಹ ಜನಾನೆಯಲ್ಲಿದ್ದ ಒಬ್ಬ.....ಅಜ್ಞಾತ.....ತಬ್ಬಲಿ.....ಕನ್ನೆ ಯನ್ನು ಅಲ್ಲವೆಂದು ನನ್ನನ್ನು ತಿರಸ್ಕರಿಸಿ, ಕೂಡಲೇ ಸೆಲೀಮನಿಂದ ದೂರವಾಗಿರಬೇಕೆಂದು ಆಜ್ಞಾಪಿಸಿದನು. ಇದರಿಂದ ನನ್ನ ಕೋಪವೂ ಕೆರಳಿ "ವಿವಾಹದ ವಚನ ಕೊಟ್ಟು ನನ್ನ ಸತೀತ್ವಾಪಹಾರ ಮಾಡಿದ ಸೆಲೀಮನನ್ನು ಅವನ ವಚನದಿಂದ ·ಬಿಡುಗಡೆಮಾಡೆ"ನೆಂದುದಕ್ಕೆ ಬಾದಷಹನು ನನ್ನ ಸತೀತ್ವವನ್ನು ಜರೆದು ಹಾಸ್ಯಮಾಡಿ ಮರಣದಂಡನೆಯ ಬೆದರಿಕೆಯಿಟ್ಟನು........ಜನಾನೆಯವ ರೆಲ್ಲರೂ ಹಾಸ್ಯಮಾಡಿ ನಗಲಾರಂಭಿಸಿದರು....ತಲೆಯೆತ್ತು ವುದಸಾಧ್ಯವಾಯ್ತು....ಯೋಚಿಸಿದೆ....ವೃಥಾ ಸಾಯುವುದ ಕ್ಕಿಂತ ಸೇಡಿಗಾಗಿ ಜೀವಿಸಿರುವುದುತ್ತಮವೆಂದು ಬಾದಷಹ ನಾಜ್ಞೆಗೆ ತಲೆಬಾಗಿದೆ....ಷೇರ್ ಅಫ್ಘನನೊಂದಿಗೆ ನನ್ನ ಲಗ್ನವನ್ನೇರ್ಪಡಿಸಿ, ಅವನಿಗಿಲ್ಲಿಯ ಸುಭೇದಾರಿಕೆಕೊಟ್ಟು

ನನ್ನನ್ನು ಸಲೀಮನಿಂದ ದೂರವಾಗಿಟ್ಟನು....ನಾನಿಲ್ಲಿದ್ದು ಬಾದಷಹನಮೇಲೆ — ಅಂತಃಪುರದವರ ಮೇಲೆ ಹಗೆ ಸಾಧಿಸುತ್ತ, ಮತ್ತೆ ಆಗ್ರವನ್ನು ಹೇಗೆ ಸೇರಬಹುದೆಂಬ ವಿಧಾನವನ್ನು ಯೋಚಿಸುತ್ತಿರುವಾಗಲೇ ಸಮ್ರಾಟ ಅಕ್ಬರನು ವಿಧಿವಶನಾದ. ಈಗ ನನ್ನನ್ನು ಹಿಂಸಿಸುತ್ತಿರುವುದೊಂದೇ ಅಪಮಾನ........ಜನಾನೆಯಲ್ಲಿ ಸಾಮ್ರಾಜ್ಞಿಯಿಂದ ಹಿಡಿದು ಬಾಂದಿಯವರೆಗೆ ಎಲ್ಲರೂ "ಭಾವೀ ಸಮ್ರಾಜ್ಞಿಯಾಗ ಬಯಸಿದ ಸುಟ್ಟಮೋರೆಯವಳೆಂ'ದು ನನ್ನನ್ನು ಅಪಹಾಸ್ಯ ಮಾಡಿ ತಲೆತಗ್ಗಿಸುವಂತೆ ಮಾಡಿದರು ........ಒಂದು ದಿನ ಅವರು ನನಗೇ ತಲೆಬಾಗುವಂತೆ ಮಾಡಬೇಕೆಂದು ಹಗಲಿರುಳೂ ನನ್ನ ಮನಸ್ಸು ಉಪಾಯಗಳನ್ನರಸುವುದು....

**ಜುಲೇಖಾ**—....ಅದನ್ನು ನೆನೆದು ಉದ್ವೇಗಗೊಳ್ಳುವುದಕ್ಕಿಂತಲೂ ಮರೆಯುವುದು ಹಿತವಲ್ಲವೇ ?

**ಮೆಹರ್**— ಅದಕ್ಕೇ ನಾನು ಹೇಳಿದುದು ಜುಲೇಖಾ—ಪಾರಸೀಕಳೆಂದಿಗೂ ಅಪಮಾನವನ್ನು ಮರೆಯಲಾರಳೆಂದು....

**ಜುಲೇಖಾ**—ನಿನ್ನ ಮಗಳೊಡನೆ ಆಡುತ್ತಿರುವಾಗ ನೀನು ಸಂತೋಷದಿಂದ ಮೈಮರೆಯುವುದನ್ನು ಕಂಡಿರುವ ನನಗೆ ನೀನು ಮರಯಲಿಚ್ಛಿಸಿದರೆ ಕಷ್ಟವಾಗದೆಂದೆನಿಸುತ್ತದೆ........... ಮೆಹರ್....

**ಮೆಹರ್**—ಇಲ್ಲ ...ಜುಲೇಖಾ....ಅವಳೊಡನಿರುವಷ್ಟು ಹೊತ್ತೂ ನನಗೆ ಸಲೀಮನ ನೆನಪಾಗುತ್ತದೆ....

**ಜುಲೇಖಾ**—ಸೀಸೀಗಾರ ಪತ್ನಿ?....ಲಾಡಿಲಿಯಾರ....

**ಮೆಹರ್**—ಷೇರ್‌ಅಫ್ಘನನ ಮಗಳು....(ಎಂದು ತಲೆತಗ್ಗಿಸಿ) ನಾನು ಆಗ್ರಾಕ್ಕೆ ಹಿಂತಿರುಗಲಾಶಿಸುವುದು....ಅವಳ ಸಲುವಾಗಿ.... ನಾನೀಗಲೇನೋ ಷೇರ್‌ಆಫ್ಘನನ ಪತ್ನಿ........ಸತ್ಯ........ ಜುಲೇಖಾ. ಆದರೆ ನನ್ನ ಹೃದಯ-ಮನಸ್ಸುಗಳೆಲ್ಲ....

**ಜುಲೇಖಾ**....(ದೂರದಲ್ಲೇನನ್ನೊ ಗಮನಿಸಿ)....ಲಾಡಿಲಿಯು ನಿನ್ನೊಡ ನಾಡಲು ಕಾತರಳಾಗಿ ನಿನ್ನ ದಾರಿ ಕಾಯುತ್ತಿರುವಳು....

**ಮೆಹರ್**—....ನಡೆ....ಅವಳನ್ನೇಕೆ ಕಾಯಿಸಬೇಕು....

(ಎಂದು ಎರಡು ಹೆಜ್ಜೆ ಹೋಗಲು ೧೫-೧೬ ವರ್ಷದ ಸುಂದರ ಆದರೆ ಹುಚ್ಚು ಹುಡುಗಿಯೊಬ್ಬಳು ತನ್ನಲ್ಲೇ ಹಾಡಿಕೊಳ್ಳುತ್ತ ಸರ್ರನೋಡಿ ಬಂದು ಜುಲೇಖೆಗೆ ಢಿಕ್ಕಿ ಹೊಡೆದೋಡಲಿರುವಾಗ, ಜುಲೇಖೆಯು ಅವಳ ಕೈಯನ್ನು ಬಲವಾಗಿ ಹಿಡಿದು ನಿಲ್ಲಿಸಿಕೊಂಡು)

**ಜುಲೇಖಾ**—ಸುಟ್ಟವೋರೆಯವಳೇ........ದಾರಿಯಲ್ಲಿ ಯಾರಾದರೂ ಇರುವದರ ಗಮನವೇ ಇಲ್ಲದಂತೆ ಓಡುತ್ತ ಹೋಗುವೆಯಾ? (ಎಂದು ಹುಡುಗಿಯ ಕಿವಿ ಹಿಂಡುವಳು)

**ಮೆಹರ್**—ಹೋಗಲಿ ಬಿಡು ಜುಲೇಖಾ........ಹುಚ್ಚಿಗಿಷ್ಟೆಲ್ಲಾ ತಿಳಿಯುವಹಾಗಿದ್ದರೆ ಹುಚ್ಚಿಯಾದಾಳೆ?... (ಹುಡುಗಿಯ ನ್ನುದ್ದೇಶಿಸಿ)....ಏನೇ ದುಲಾರೀ....ಎಲ್ಲಿ ಹೋಗಿದ್ದೆಯೇ ಇಷ್ಟು ದಿನ?....(ದುಲಾರಿಯು ಸುಮ್ಮನೆ ಹಲ್ಲು ಕಿರಿಯುತ್ತ ನಿಲ್ಲುವಳು)

**ಜುಲೇಖಾ**—ಅವಳಿಗೇನು ಒಂದು ನೆಲೆಯೇ? ನಾಯಿ ಅಲೆದಹಾಗೆ ಅಲೆಯುವುದು....ವೈಮೇಲೊಂದು ಬಂಡಿ ಕೊಳೆಯನ್ನು ಹೊತ್ತುಕೊಂಡು ನಮ್ಮ ಬಳಿಗೆ ಬರುವುದು....ಎಷ್ಟು ದಿನ ವಾಯ್ತೇ ನೀನು ಸ್ನಾನಮಾಡಿ?....

**ದುಲಾರಿ**—ನಿನ್ನ ಗೋರಿಯಾಯ್ತುಲ್ಲ........ಅಂದು....(ಎಂದು ಹಲ್ಲು ಕಿರಿಯುವಳು)

**ಮೆಹರ್**—ನಿನ್ನ ತಲೆ....

**ಜುಲೇಖಾ**—ಇವಳನ್ನೇಕೆ ಇಲ್ಲಿಲ್ಲ ಸೇರಿಸುವೆ ಮೆಹರ್........ಓಡಿಸಿ ಬಿಡು........ ..ಅವಳು ಚೊಕ್ಕಟವಾಗಿದ್ದಲ್ಲದೆ ನಮ್ಮಲ್ಲಿಗೆ ಬರಬೇಡವೆನ್ನು....

**ದುಲಾರಿ**—ಚೊಕ್ಕಟವೆನ್ನುವುದು ನಿಮ್ಮಜ್ಜನ ಆಸ್ತಿಯೋ ?

**ಜುಲೇಖಾ**—(ಸಿಟ್ಟಿಗೆದ್ದವಳಂತೆ) ಛೀ! ಸುಟ್ಟಮೋರೆಯವಳೇ (ಎಂದು ಹೊಡೆಯಲು ಹೋಗುವಂತೆ ಮಾಡಲು, ಮೆಹರಳು ತಡೆದು)

**ಮೆಹರ್**—ಹೋಗಲಿ ಬಿಡು ಜುಲೇಖಾ!....ಹುಚ್ಚು ಹುಡುಗಿ....

**ಜುಲೇಖಾ**—ನೀನೇಕಿಷ್ಟು ಅವಳಿಗೆ ಸಲಿಗೆ ಕೊಡುವೆ ಮೆಹರ್.... ನಿನ್ನಿಂದಲೇ ಅವಳಿಗೀ ಪ್ರತಿಷ್ಠೆ........ಎಲ್ಲೆಲ್ಲೋ ಅಲೆದು, ನಮ್ಮನ್ನೇ ಎದುರಿಸುವ ಕೆಟ್ಟ ಚಾಳಿಯನ್ನು ಕಲಿತು ಬಂದಳು....

**ಮೆಹರ್**—ಅವಳನ್ನು ನೋಡಿದರೆ ನನ್ನಲ್ಲಿ ಕನಿಕರವು ಮೂಡುತ್ತದೆ ....ಜುಲೇಖಾ....ಪಾಪ ! ಅವಳ ತಾಯಿತಂದೆ ಯಾರೋ? ....ನನ್ನಂತೆಯೇ ಅವಳೂ ತಬ್ಬಲಿಯಂತೆ ದೂರಮಾಡಲ್ಪಟ್ಟಿ ರಬಹುದೆಂದು ಅನಿಸುವುದು....ಹೋಗು....ಅವಳಿಗೆ ಸ್ನಾನ ಮಾಡಿಸಿ....ಏನಾದರೂ ತಿನ್ನಲು ಕೊಡು........ಹೊತ್ತು-ಹೊತ್ತಿಗವಳಿಗೆ ಊಟ ಕೊಡುವವರಾರಿದ್ದಾರೆ?....ಹೊಟ್ಟೆ ತುಂಬ ತಿನ್ನುವಳೋ ಇಲ್ಲವೋ....(ಎಂದು ಹೊರಡುವಳು. ಮೆಹರಳಿಗೆ ಕೇಳಿಸುವಂತೆ ಘಟ್ಟಿಯಾಗಿ ಜುಲೇಖೆಯು ದುಲಾರಿ ಯನ್ನು )

**ಜುಲೇಖಾ**—ನಡಿಯೇ ಪಿಶಾಚಿ....ಸ್ನಾನಮಾಡು ನಡೆ....

**ದುಲಾರಿ**—ಊಹುಂ....ನಾನೊಲ್ಲೆ....ಮೆಹರಳು ವಾರಕೊಮ್ಮೆ ಸ್ನಾನ ಮಾಡುವುದಿಲ್ಲವೆ? ನಾನೂ ಹಾಗೆಯೇ ಮನಬಂದಾಗ ಮಾಡುತ್ತೇನೆ!....

**ಜುಲೇಖಾ**—ಒಲ್ಲೆನೆನ್ನುವೆಯಾ ? ಆ ? (ಎಂದು ಕಿವಿ ಹಿಂಡುತ್ತ ಮೆಲ್ಲನೆ)—ಏನು ಸುದ್ದಿ ?

**ದುಲಾರಿ**— ( ಅಹ....ಹ....ಹಾ ಎನ್ನುತ್ತ, ಮಧ್ಯೆ ಮಧ್ಯೆ)............... ಬಾದಷಹ ಜಹಾಂಗೀರನು ಗುಟ್ಟಾಗಿ ಬಂದು ಇಲ್ಲಿಗೆ ಅನತಿ ದೂರದಲ್ಲಿ ಬೀಡು ಬಿಟ್ಟುಕೊಂಡಿದ್ದಾನೆ........ಆ....ಹ.... ಹ....ಹಾ.

**ಜುಲೇಖಾ**—ಕರ್ಣಸಿಂಹರು ? (ಎಂದು ಕಿವಿ ಹಿಡಿದು ಆಡಿಸುತ್ತಿರುವಳು.)

**ದುಲಾರಿ**—ಇದನ್ನರಿತಿರುವರು....

**ಜುಲೇಖಾ**—ಹೇಗೆ ತಿಳಿದರು ?....

**ದುಲಾರಿ**—ನಾನೇ ತಿಳಿಸಿದೆ....

**ಜುಲೇಖಾ**—ಜಹಾಂಗೀರನು ಇಲ್ಲಿಗೆ ಬರಲೇನು ಕಾರಣ ?

**ದುಲಾರಿ**—ಮೆಹರುನ್ನೀಸಾ....

**ಜುಲೇಖಾ**—ಓ ! ಕರ್ಣಸಿಂಹರಿಂದೇನು ಸುದ್ದಿ ತಂದಿರುವೆ ?

**ದುಲಾರಿ**—ಒಂದು ಪತ್ರಕೊಟ್ಟಿದ್ದಾರೆ....(ಎಂದು ಮಡಿಲಿನಿಂದ ತೆಗೆದು ಕೊಡಲು ಹೋಗುವಳು)

**ಜುಲೇಖಾ**—ಮುಚ್ಚಿಟ್ಟುಕೊಂಡು ಓದು—ದಾಸಿಯೊಬ್ಬಳು ಇತ್ತ ಬರುತ್ತಿದ್ದಾಳೆ....(ಎಂದು ದುಲಾರಿಯು ಕೆದರಿದ ತಲೆಗೂದಲನ್ನು ಸರಿಮಾಡುತ್ತ ನಿಲ್ಲಲು, ದುಲಾರಿಯು ಓದುವಳು)

“ ನಾಳೆ ಮಧ್ಯರಾತ್ರಿಯಾದಮೇಲೆ ಮೆಹರಳ ಸಲುವಾಗಿ ಬರುವರು ....ಸಮಯಕ್ಕಾಯ್ದು ಏನಾದರೂ ಮಾಡಿ ನಿಮ್ಮನ್ನೂ ಅವರು ಮೆಹರಳೊಂದಿಗೆ ಒಯ್ಯುವಂತೆ ಮಾಡಿಕೊಳ್ಳುವುದು ನಿಮ್ಮ ಭಾರ....ಆಗ್ರಾದಲ್ಲಿ ಪಾನ್‌ವಾಲಾ ಮೂಲ್ಕ ನನ್ನ

ಸುದ್ದಿ ತಿಳಿಯಬಹುದು....ಕಳುಹಬಹುದು....ಫಾತೇಪುರ್ ಸಿಕ್ರಿ–ಗೋಪ್ಯಗೋಷ್ಠಿ ದುಲಾರಿ ಬಲ್ಲಳು...."

**ಜುಲೇಖಾ**—ಕಾಗದವನ್ನು ಹಾಳುಮಾಡು....ಆಗಲೆಂದು ತಿಳುಹಿಸು ....ದಯಾಮಣಿಯನ್ನೂ ನನ್ನೊಡನೆ ಕರೆದೊಯ್ಯುವೆನು.... ದಾಸಿಯು ಬಂದಳು....(ಮತ್ತೆ ಕಿವಿಯನ್ನು ಹಿಂಡುತ್ತ) ಛೆ! ದುಷ್ಟೆ....ಸ್ನಾನಮಾಡೆಂದರೆ ಒಲ್ಲೆನೆನ್ನುವಿಯಾ ?....ನಡೆ! (ಎಂದು ಕಿವಿ ಹಿಡಿದೆಳೆದೊಯ್ಯುವಳು.)

---

## ದೃಶ್ಯ ೨

[ಜನಾನೆಯಲ್ಲಿ. ಸಂಜೆ ಕಳೆದಿದೆ. ಹಿಂದಿನಿಂದ ಸಂಗೀತವಾದ್ಯಗಳ ಸುನಾದವು ಕೇಳಿ ಬರುತ್ತಿದೆ. ಮೆಹರುನ್ನೀಸಳು ಸಿಂಗರಿಸಿಕೊಳ್ಳಲು ಜುಲೇಖೆಯು ಸಹಾಯಮಾಡುತ್ತಿರುವಳು. ಮೆಹರುನ್ನೀಸಳ ಮುಖದಲ್ಲಿ ಒಂದಪೂರ್ವ ಶೋಭೆಯಿದೆ. ಜುಲೇಖೆಯು ಮೆಹರಳ ಶೃಂಗಾರಕ್ಕೆ ಸಹಾಯಮಾಡುತ್ತಿದ್ದರೂ ವಿಚಾರವಶಳಾಗಿದ್ದಾಳೆಂಬುದನ್ನು ಅವಳ ಮುಖದಲ್ಲಿ ಕಾಣಬಹುದು.]

**ಜುಲೇಖಾ**—ಇಂದೇನೀ ಹೊಸಬಗೆಯ ಉತ್ಸಾಹ ಮೆಹರ್ ?

**ಮೆಹರ್**—ಕಾರಣವಿದೆ ಜುಲೇಖಾ!

**ಜುಲೇಖಾ**—ಅದೂ ಪ್ರಬಲವಾದುದಲ್ಲವೆ ?

**ಮೆಹರ್**—(ಮೆಲುನಗೆ ಸೂಚಿಸಿ)........ನಾನಿಂದು ಅತಿಸೌಂದರ್ಯವತಿಯಾಗಿ ಕಾಣುವಂತೆ ಉಡುಪು ಧರಿಸಲು ಸಹಾಯಮಾಡು ಜುಲೇಖಾ....

**ಜುಲೇಖಾ**—ನೀನೇ ನಿನ್ನ ವಸ್ತ್ರಗಳನ್ನು ಚುನಾಯಿಸಿರುವಾಗ ನಾನಿನ್ನೇನು ಸಹಾಯಮಾಡಲು ಸಾಧ್ಯ....ಈ ಬಿಳಿಯ ವಸ್ತ್ರಗಳು, ಈ ಕರಿಯ ಜವನಿಕೆಯೆರಡು ನಿನಗಿದ್ದರೆ ನಿನ್ನ

ಸೌಂದರ್ಯವು ಎಂತಹ ಹಂಸವನ್ನಾದರೂ ನಾಚಿಸುವುದು.... ಆಭರಣಗಳೂ ಇವುಗಳಿಗಿಂತ ನಿನ್ನ ಸೌಂದರ್ಯವನ್ನು ಹೆಚ್ಚಿಸಲಾರವು. ಮೆಹರ್....ನಿನ್ನ ಈ ಬದಲಾವಣೆಗೆ ಏನೋ ವಿಶೇಷ ನಡೆದಿರಬೇಕು....ಅದನ್ನು ನನ್ನಿಂದ ಮರೆಮಾಚಿರುವೆ....

**ಮೆಹರ್**—(ಗಾಂಭೀರ್ಯ ತಾಳಿ)....ನನ್ನ ಭವಿಷ್ಯವನ್ನು ಈ ರಾತ್ರಿಯು ನಿರ್ಧರಿಸುವುದು, ಜುಲೇಖಾ....ನನ್ನನ್ನು ನೋಡಲೊಬ್ಬ ಮಹಾಪುರುಷನು ಬರುವನು....ಆತನು ನನ್ನೊಡನಿರುವಾಗ ಯಾರೂ ಬಂದು ನಮ್ಮನ್ನು ತೊಂದರೆಪಡಿಸದಂತೆ ನೋಡಿಕೊ.

**ಜುಲೇಖಾ**—(ಕ್ಷಣಕಾಲ ಸುಮ್ಮನಿದ್ದು) ........ನಿನ್ನ ಭವಿಷ್ಯವನ್ನು ಬದಲಿಸತಕ್ಕವರೊಬ್ಬರು....ಅವರು ಬರುವುದನ್ನು ನೀನು ಹೇಗರಿತೆ ?

**ಮೆಹರ್**—ವಿಷಯಗಳನ್ನರಿಯಲು ನನ್ನದೇ ಒಂದು ಮಾರ್ಗವಿದೆ....

**ಜುಲೇಖಾ**—ಗೂಢಚಾರರನ್ನಿಟ್ಟಿರುವೆಯಾ ?

**ಮೆಹರ್**—........(ಸ್ವಲ್ಪ ತಡೆದು) ........ಇಲ್ಲ....ನಾನಿಟ್ಟಿಲ್ಲ....ಆದರೆ ನನಗಾಗಿ ಶ್ರಮಿಸುವವರು ಕೆಲವೆಡೆಗಳಲ್ಲಿರುವರು....ಇನ್ನು ಹೆಚ್ಚು ಕೇಳಬೇಡ ಜುಲೇಖಾ....ನೀನು ಬುದ್ಧಿವಂತಳು.... ಊಹಿಸಿಕೋ. (ದಾಸಿಯೊಬ್ಬಳು ಮದ್ಯ ಪಾತ್ರೆಯನ್ನು ತಂದಿಟ್ಟು ಹೋಗುವಳು.)

**ಜುಲೇಖಾ**—....(ತನ್ನಲ್ಲೇ)....ನೂರಳೆಂದು ನನಗೆ ಹೆಸರಿಟ್ಟಿದ್ದರು.... ಮತ್ತೆ ಅದೇರೀತಿ ಸಂಬೋಧಿಸುವರೆ ?....ನೋಡಬೇಕು.... (ಎಂದು ಯೋಚನೆಯಲ್ಲಿ ಮೈಮರೆತು ಕುಳಿತಿರುವಳು....ಹಿಂದಿನಿಂದ ನಿಧಾನವಾಗಿ ಜಹಾಂಗೀರ್ ಬಾದಷಹನು ಪ್ರವೇಶಿಸಿ,

ಒಂದೆಡೆ ನಿಲ್ಲುವನು. ಅದನ್ನು ಜುಲೇಖೆಯು ಗಮನಿಸಲು, ಜಹಾಂಗೀರನವಳಿಗೆ ಹೊರಡುವಂತೆ ಸನ್ನೆ ಮಾಡುವನು. ಜುಲೇಖೆಯು ಸದ್ದಿಲ್ಲದೆ ನಿಷ್ಕ್ರಮಿಸುವಳು. ಇದನ್ನರಿಯದ ಮೆಹರಳು ಜುಲೇಖೆಯಿರುವಳೆಂದೇ ಭಾವಿಸಿ)

**ಮೆಹರ್**—ಸ್ವಲ್ಪ ಮಧುವನ್ನು ಕೊಡು, ಜುಲೇಖಾ........(ಎಂದು ಹಾಗೆಯೇ ಯೋಚಿಸುತ್ತ ಕುಳಿತಿರುವಳು. ಜಹಾಂಗೀರನು ತಾನೇ ಸದ್ದಿಲ್ಲದೆ ಮಧುವನ್ನು ಪಾತ್ರೆಗೆ ಸುರಿದು ಹಿಂದಿನಿಂದಲೇ ಕೊಡಲು, ಮೆಹರಳು ಪಾತ್ರೆಯನ್ನು ತೆಗೆದುಕೊಂಡು, ಕುಡಿಯದೆಯೇ)

**ಮೆಹರ್**—....ಮುನ್ನಿನಂತೆಯೇ ಇರುವರೇ?........ಕೆಲವರ್ಷಗಳು ಕಳೆದುದು ಅವರಲ್ಲೇನಾದರೂ ಬದಲಾವಣೆಯಾಗಿರಬಹುದಲ್ಲವೇ ಜುಲೇಖಾ ?

**ಜಹಾಂಗೀರ್**—(ನಗುಮುಖವಾಗಿ)....ನೀನರಿಯೆಯಾ ನೂರ್....? (ಮೆಹರಳು ಗಾಬರಿಗೊಂಡೆದ್ದು ತಿರುಗಿನೋಡುವಳು. ಕೈಯಿಂದ ಮಧುವಿನ ಬಟ್ಟಲುರುಳುವುದು....ಮುಖವು ಗಂಭೀರವಾಗುವುದು. ಹುಬ್ಬು ಗಂಟಿಕ್ಕುವುದು. ಮುಖವನ್ನು ಬೇರೆಡೆಗೆ ತಿರುಗಿಸುವಳು. ಜಹಾಂಗೀರನು ಉದ್ವಿಗ್ನಚಿತ್ತನಾಗಿ ಮೆಹರಳನ್ನು ನೋಡಿ)

**ಜಹಾಂಗೀರ್**—....ನಿನಗಾಗಿ ಬಂದಿದ್ದೇನೆ....ನೂರ್....

**ಮೆಹರ್**—ಏಕೆ? ಒಂದು ಸಲ ಕಳಂಕ ಹೊರಿಸಿದ್ದಾಯಿತು.... ಮತ್ತೆಯೂ ನನ್ನ ಮೇಲೊಂದಪಮಾನದ ಹೊರೆಹೊರಿಸಲೆಂದೇ ?

**ಜಹಾಂಗೀರ್**—........ನಿನಗಾಗಿ ತಂದೆಯನ್ನೂ ಎದುರಿಸಿದುದು ನೀನರಿಯೆಯಾ ? ನೂರ್....!

**ಮೆಹರ್**—ನನಗಾದ ಗತಿ ?

**ಜಹಾಂಗೀರ್**—ಏನು ಮಾಡಲಿ ನೂರ್!....ಆಗ ನನ್ನ ಕೈಗಳು ಕಟ್ಟಿನಲ್ಲಿದ್ದುವು....ನೀನು ಪಟ್ಟ ಕಷ್ಟಗಳೆಲ್ಲವೂ ಕಿವಿಗೆ ಬಿದ್ದುವು....ಆಗ ನನಗಷ್ಟು ಸ್ವಾತಂತ್ರ್ಯವಿರಲಿಲ್ಲ....ಈಗ ನಿನ್ನನ್ನೊಯ್ಯಲು ಬಂದಿದ್ದೇನೆ....ನನ್ನ ಮಡದಿಯಂತೆ ಬಾ....ನೂರ್....!

**ಮೆಹರ್**—ಹಿಂದೊಮ್ಮೆ ಕೊಟ್ಟ ವಚನವು ಹೇಗೆ ಕೊನೆಗಂಡಿತು....?

**ಜಹಾಂಗೀರ್**—ಈಗ ಬಾದಷಹನು ಮಾತಾಡುತ್ತಿರುವನು........ ಸಲೀಮನಲ್ಲ....

**ಮೆಹರ್**—(ವ್ಯಂಗ್ಯವಾಗಿ)....ಸಮ್ರಾಟರೆದುರಿನಲ್ಲಿ ತಲೆಬಾಗಿ ಹೇಳುವೆನು....ಮತ್ತೊಮ್ಮೆ ಅಪಹಾಸ್ಯಕ್ಕೆ ಗುರಿಯಾಗುವ ಆಸೆ ನನಗಿಲ್ಲ....ಬೇಗಮ್ ಮಹಲಿನಲ್ಲಿ ಬಾದಷಹರ ಮನ ರಂಜನೆಗೆ ಸಾಕಷ್ಟು ರಾಣಿಯರಿದ್ದಾರೆ....ಅವರಂತೆ ನಾನೂ ಒಂದು ವಿಲಾಸದ ವಸ್ತುವಾಗಲೆಳಸುವುದಿಲ್ಲ............ ಕ್ಷಮಿಸಬೇಕು.

**ಜಹಾಂಗೀರ್**—ಅವರನ್ನೆಲ್ಲ ರಾಜಕಾರಣಗಳಿಗಾಗಿ ವಿವಾಹವಾಗ ಬೇಕಾಯ್ತು....ನೂರ್....ನನಗೆ ನಿನಗಿಂತ ಪ್ರಿಯರಾದವರು ಅವರಲ್ಲಿ ಯಾರಿರುವರು?

**ಮೆಹರ್**—ಅಂಬರಕುಮಾರಿ ಇಲ್ಲವೆ?

**ಜಹಾಂಗೀರ್**—(ತಲೆತಗ್ಗಿಸಿ)....ನೂರ್!....ನನ್ನ ಕಡೆ ನೋಡು.... ನನ್ನನ್ನಿಷ್ಟು ದ್ವೇಷಿಸುವೆಯಾ? (ಮೆಹರಳು ನೋಡುವಳು) ಮನುಷ್ಯನಿಗೆ ಕಣ್ಣುಗಳೆರಡೂ ಇರಬೇಕು........ನೂರ್ (ಮೆಹರಳ ಭುಜಹಿಡಿದು) ನೀನು ನನ್ನವಳಾಗಬೇಕು.................ಇದು ನನ್ನ ಹೃದಯದಿಂದ ಹೊರಡುತ್ತಿರುವ ಮಾತು.... ನಂಬಲಾರೆಯಾ? (ಎಂದು ದೈನ್ಯದೃಷ್ಟಿಯಿಂದವಳನ್ನು

ನೋಡುವನು. ಮೆಹರಳು ಮೆಲ್ಲನೆ ನಗುಮುಖಳಾಗುವಳು. ಹೊರಗಡೆಯಲ್ಲಿ ಕಲಕಲ ಶಬ್ದವೆದ್ದು ಹಿಂದೆಯೇ ಹುಚ್ಚುಹುಡುಗಿ ದುಲಾರಿಯು ಹುಚ್ಚುಚ್ಚಾಗಿ ನಗುತ್ತ ಹಾಡುತ್ತ ಒಳಗೋಡಿ ಬರುವಳು. ಜಹಾಂಗೀರನೂ ಮೆಹರಳೂ ದೂರವಾಗುವರು.)

**ಮೆಹರ್**—ಏನಿದು ದುಲಾರಿ? ಇಲ್ಲಿಗೇಕೆ ಬಂದೆ?

**ದುಲಾರಿ**—(ಗಟ್ಟಿಯಾಗಿ ನಗುತ್ತಲೇ ಮಧ್ಯೆ)....ಷೇರ್ ಆಫ್ಘನನನ್ನು ....ಮುಗಿಸಿದರು....

**ಮೆಹರ್**—ನಿನ್ನ ಮಾತಿನರ್ಥವೇನು ದುಲಾರಿ?

**ದುಲಾರಿ** —....ಕೊಂದರೆನ್ನುವುದಕ್ಕೆ ಅರ್ಥಬೇಕಂತೆ....ಹ....ಹ.... ಹ....ಹಾ....ನಾಳೆಯಿಂದ ಇಲ್ಲಿಯ ಸುಭೇದಾರಿ ನನ್ನದು.... (ಮೆಹರಳು ಶಂಕೆಯಿಂದ ಜಹಾಂಗೀರನ ಮುಖ ನೋಡುವಳು. ಅವನು ತಲೆತಗ್ಗಿಸುವನು......ಜುಲೇಖೆಯು ಬೇಗನೆ ಬಂದು ದುಲಾರಿಯ ಕಿವಿಹಿಡಿದೆಳೆದುಕೊಂಡು ಹೋಗುವಾಗ, ದುಲಾರಿಯು ಹೋಗದೆ ಹಟಮಾಡುತ್ತ)....ಬೇಗಂ ಸಾಹಿಬಾ....! ಹೋಯ್ತು ನನ್ನ ಕಿವಿ....ಈ ಸುಟ್ಟಮೋರೆಯ ಡಾಕಿನಿಯು ....ನನ್ನ ಕಿವಿ ಹಿಡಿದೆಳೆದು ಆನೆಯ ಕಿವಿಯಂತೆ ಮಾಡಿ ಬಿಟ್ಟರೆ ಅವಕ್ಕೆ ತಕ್ಕ ಓಲೆಯನ್ನಾರು ಮಾಡಿಸಿಕೊಡುವರು?

**ಜಹಾಂಗೀರ್**— (ಕೈತಟ್ಟಲು, ಜುಲೇಖೆಯು ನಿಲ್ಲುವಳು) ........ನಾಳೆ ಬೇಗಮರು ಆಗ್ರಾಕ್ಕೆ ಹಿಂತಿರುಗುವರು............ಅದಕ್ಕೆಲ್ಲ ಸಿದ್ಧತೆಯು ನಡೆಯಲಿ....(ಜುಲೇಖೆಯು ಮೆಹರಳ ಮುಖ ನೋಡುವಳು. ಮೆಹರಳು ತಲೆದೂಗಿ)

**ಮೆಹರ್**—ನಿನ್ನ ಸಹಾಯಕ್ಕೆ ಯಾರನ್ನೊಯ್ಯುವೆ....ಜುಲೇಖಾ....?

**ಜುಲೇಖಾ**—ಅಪ್ಪಣೆಯಾದರೆ, ನನ್ನ ದಾಸಿ ದಯಾಮಣಿಯನ್ನು.... (ಎಂದು ತಲೆತಗ್ಗಿಸಿಕೊಂಡೇ ಉತ್ತರಕೊಡುವಳು)

**ದುಲಾರಿ**—....ನಾನು?

**ಮೆಹರ್**—(ಮೆಲುನಗೆ ನಕ್ಕು) ನೀನೂ ಜುಲೇಖಯೊಂದಿಗೆ ಹೋಗು.

**ದುಲಾರಿ**—ಬೇಗಂ ಸಾಹಿಬಾ....ಜುಲೇಖಯೊಂದಿಗೆ ಹೋಗಬೇಕಾದರೆ ನನ್ನ ಕಿವಿಯನ್ನು ಹೊತ್ತು ತರಲು ಒಂದು ದೊಡ್ಡ ಅರಬ್ಬೀ ಕುದುರೆಯನ್ನು ನನಗೆ ಕೊಡುವಿರಾ ?

**ಜುಲೇಖಾ**—ಛೀ ! ನಾಚಿಕೆಗೆಟ್ಟನಾಯಿ....ಹದ್ದಿಲ್ಲದೆ ಮಾತನಾಡುವೆಯಾ ನಡೆ....ನಿನಗಾಗಿ ಕುದುರೆಏಕೆ........ಕೋರಡೆಯು ಕಾದಿದೆ (ಎಂದೆಳೆದುಕೊಂಡು ಹೋಗುತ್ತಿರಲು)

**ಮೆಹರ್**—ಅವಳನ್ನು ಶಿಕ್ಷಿಸಬೇಡ ಜುಲೇಖಾ. (ಜುಲೇಖಯು ನಮಿಸಿ ಹೋಗುವಳು. ಹೊರಗಿನಿಂದೊಮ್ಮೆ ದುಲಾರಿಯ ಹುಚ್ಚುನಗೆ ಕೇಳಿಬರುವುದು.)

**ಜಹಾಂಗೀರ್**—ಆ ಹುಚ್ಚುಹುಡುಗಿಯ ಮೇಲೇಸಿಷ್ಟು ಮಮತೆ.... ನೂರ್....?

**ಮೆಹರ್**—ಹುಚ್ಚಿಯಾದರೂ ನನ್ನಂಥ ದಿಕ್ಕಿಲ್ಲದ ಒಂದು ತಬ್ಬಲಿ.

**ಜಹಾಂಗೀರ್**—ಹಿಂದೂಸ್ಥಾನದ ಸಮ್ರಾಜ್ಞಿಯೂ ದಿಕ್ಕಿಲ್ಲದ ತಬ್ಬಲಿಯೆ....ನೂರ್.... ?

**ಮೆಹರ್**—(ಮೆಲುನಗೆ ಬೀರಿ, ಜಹಾಂಗೀರನ ಮುಖನೋಡಿ) ....ಇಂದಿನಿಂದಲ್ಲ....(ಎಂದು ತುಂಬಿದ ಮಧು ಬಟ್ಟಲನ್ನು ಅವನಿಗೆ ನೀಡುವಳು. ಜಹಾಂಗೀರನು ಪಸನ್ನಮುಖನಾಗಿ ಅದನ್ನು ಸ್ವೀಕರಿಸುವನು.)

ತೆರೆ.

# ಮೂರನೆಯ ಅಂಕ

---

## ದೃಶ್ಯ ೧

[ ಕಾಲ--ಕ್ರಿ. ಶ. ೧೬೨೬. ಸ್ಥಳ--ಶೀಷ್ ಮಹಲಿನ ನೆಲಮಾಳಿಗೆಯೊಂದರಲ್ಲಿ ರಹಸ್ಯಕೂಟ. ಮೇವಾಡದ ಮಹಾರಾಣಾ ಕರ್ಣಸಿಂಹ, ಅವರ ಚತುರಸಹೋದರ (ಅಲ್ಲದೆ ಷಹಜಾದಾ ಖುರುಮನ ಪರಮಿತ್ರ) ಭೀಮಸಿಂಹ, ಒಮ್ಮೆ ಅಂಬರದ ರಾಜ ಮನೆತನದವನಾಗಿದ್ದು ಈಗ ಇಸ್ಲಾಂ ಮತವನ್ನಪ್ಪಿದ್ದ ಪ್ರಸಿದ್ಧ ಸೇನಾಪತಿ (ಅಲ್ಲದೆ ಕಾಬೂಲಿನ ಸುಭೇದಾರ) ಮಹಬತ್ ಖಾನನೂ ತಮ್ಮ ಪ್ರಮುಖ ಮಾರ್ಗದರ್ಶಿಕೆ ಜುಲೇಖೆಯ ದಾರಿ ಕಾಯುತ್ತಲಿದ್ದಾರೆ.]

**ಭೀಮಸಿಂಹ**—ಖಾನ್ ಸಾಹೇಬರೆ........ತಮ್ಮ ಹಿರಿಯರು ಮಹಾರಾಣಾ ಪ್ರತಾಪಸಿಂಹರ ತಮ್ಮಂದಿರು....ಪ್ರತಾಪಸಿಂಹರಂತೆ ಸ್ವಾತಂತ್ರ್ಯವನ್ನಾಶಿಸದೆ ಅಕ್ಬರನಿಗೆ ಶರಣಾದರು....ಫಲವೇನಾಯ್ತು? ಸಮ್ರಾಟ ಅಕ್ಬರನವರನ್ನು ನಾಯಿಗಿಂತಲೂ ಕೀಳಾಗಿ ಆದರಿಸಿದನು....ಶಕ್ತಸಿಂಹರು ಶತೃವಿಗೆ ಶರಣು ಹೊಡೆದಿದ್ದರೂ ತಮ್ಮಾತ್ಮ ಗೌರವವನ್ನು ಕಳೆದುಕೊಂಡಿರಲಿಲ್ಲ....ಆ ಅಪಮಾನವನ್ನು ಸಹಿಸಲಾರದೆ ಸಾವನ್ನಪ್ಪಿದರು ....ಅದನ್ನು ಮರೆತು ತಾವು....

**ಮಹಬತ್**— (ಜಿಗುಪ್ಸೆ-ಕೋಪಗಳಿಂದ) ....ಅಹುದು....ಮತಭ್ರಷ್ಟನಾದೆ....ಪರಕೀಯರ ಎಂಜಲಿಗೆ ಕೈಯ್ಯೊಡ್ಡಿದೆ....ಅದರ ಫಲವಾಗಿ ನಮ್ಮವರಿಗೇ ಚಿತ್ರಹಿಂಸೆಗಳನ್ನೂ ಕೊಟ್ಟೆ.... ಅದಕ್ಕಾಗಿ ಈಗ ಪಶ್ಚಾತ್ತಾಪಪಡುತ್ತಿದ್ದೇನೆ........ನನ್ನ ಹಿರಿಯರ ಹಾದಿಯನ್ನೇ ನಾನೂ ಏಕೆ ಹಿಡಿಯಬಾರದೆನಿಸುತ್ತಿದೆ....

**ಭೀಮಸಿಂಹ**—ತಮಗಾದ ಅಪಮಾನಕ್ಕೆ ತಾವಿಷ್ಟು ಮನನೊಂದಿರುವಿರಿ....ಅಖಿಲ ಭಾರತದಲ್ಲಿನ ಹಿಂದೂಗಳಿಗೆಷ್ಟು ಬಗೆಯಿಂದ ಅಪಮಾನವಾಗುತ್ತಿದೆ ಬಲ್ಲಿರಾ ?

**ಮಹಬತ್**— (ಮೌನ)

**ಭೀಮಸಿಂಹ**—ನಮ್ಮವರು ವರುಷವೆಲ್ಲವೂ ಕಷ್ಟಪಟ್ಟು ಬೆವರು ಬಸಿದು ಬೆಳೆದ ಬೆಳೆಯ ಫಲವನ್ನೆಲ್ಲ, ಮೊಗಲರು ಭಯಪಡಿಸಲು ನಡುಗುತ್ತ ಅವರಿಗೆ ತೆರುತ್ತಿರುವರು. ಹಾಗೆ ತೆರದಿದ್ದರೆ ಅವರ ಬೆಳೆಗೆ ಬೆಂಕಿ ಬೀಳುವುದು, ಮನೆಯುರುಳುವುದು, ಹೆಂಗಸರ ಮಕ್ಕಳ ಸರ್ವನಾಶವಾಗುವುದು.

**ಕರ್ಣಸಿಂಹ**—ಪರಕೀಯರು ನಮ್ಮ ಸರ್ವಸ್ವವನ್ನು ಸುಲಿದುಕೊಂಡು ತಮ್ಮ ಹೊಟ್ಟೆ ಬೆಳೆಸಿಕೊಳ್ಳುತ್ತಿದ್ದರೂ ನಮ್ಮನ್ನೇ ಆದುಮಿ ಆಡಳಿತ ನಡೆಸಲು ಅವರಿಗೆ ತಮ್ಮಂತಹವರ ಬೆಂಬಲ....

**ಭೀಮಸಿಂಹ**—ಕೋಟ್ಯಾಂತರ ಹಿಂದೂಗಳು ಒಪ್ಪತ್ತುಂಡು ಜೀವಿಸುತ್ತಿರುವರು....ಧನಮಾನಗಳನ್ನು ಕಳೆದುಕೊಂಡ ಅನೇಕ ನಿರ್ಬಲರ ಆರ್ತನಾದವು ಮುಗಿಲನ್ನೆಲ್ಲ ವ್ಯಾಪಿಸಿದೆ....

**ಕರ್ಣಸಿಂಹ**—ಅಲ್ಲಿಗೂ ನಮ್ಮ ನಿರ್ಲಜ್ಜ ಬಂಧುಗಳ ಕರುಳು ಕಚ್ಚಲಿಲ್ಲ....(ಜುಲೇಖೆಯು ಮರೆಯನ್ನು ಬಿಟ್ಟು ಮುಂದಕ್ಕೆ ಬರುತ್ತ)

**ಜುಲೇಖಾ**—ಸಮ್ರಾಟನು ತೋರಿಸಿದ ರೊಟ್ಟಿಯ ತುಣಸಿನಾಸೆಗೆ.... (ಎಲ್ಲರೂ ಚಕಿತರಾಗಿ ನೋಡಿ, ಅನಂತರ ಮರ್ಯಾದೆ ಕೊಟ್ಟು ದೂರ ನಿಲ್ಲುವರು)....ತಮ್ಮ ಊರು-ಕೇರಿಗಳನ್ನು ಕಟುಕರಿಗೊಪ್ಪಿಸಿ ಹಾಳು ಕೆಡವಿ, ತಾವು ನಿಶ್ಚಿಂತರಾಗಿ ಬಾದಷಹನ ಸೇವೆಯಲ್ಲಿರುವರು...........ಇಂತಹ ಸುಖಲೋಲುಪ್ತಿಗಳು

ಲಾಲಸೆಯ ದಾಸರಿಂದಲೇ ಹಿಂದೂಸ್ಥಾನಕ್ಕೆ ಈ ಮಹಾ ವಿಪತ್ತು ಬಂದೊದಗಿತು....

**ಕರ್ಣಸಿಂಹ**—ಇಂತಹ ನಾಯಿಗಳ ದೇಶದ್ರೋಹದಿಂದಲೇ ಭಾರತದಲ್ಲಿ ಮೊಗಲ ರಾಜ್ಯಸ್ಥಾಪನೆಯಾಗಿ, ಅವರ ಪ್ರಾಬಲ್ಯಕ್ಕೂ ಕಾರಣವಾಯ್ತು....

**ಭೀಮಸಿಂಹ**—ಹೇಳಿ ಖಾನ್ ಸಾಹೆಬಾ! ಕೋಟ್ಯಾಂತರ ಕಷ್ಟಜೀವಿಗಳ ಉದ್ಧಾರ ಕಾರ್ಯವು ಅಗತ್ಯವಲ್ಲವೆ?....ಭಾರತೀಯರೆಂಬ ಹೆಮ್ಮೆ ನಮಗಿದೆ. ನಮ್ಮ ಗೌರವವನ್ನುಳಿಸಿಕೊಳ್ಳಬೇಕೆಂಬ ಅಭಿಲಾಷೆಯಿದೆ; ಹಿಂದೂಗಳಿಗೆ ಸೌಖ್ಯವನ್ನುಗಳಿಸಿಕೊಡಬೇಕೆಂಬ ಹಟವಿದೆ....ಆದ್ದರಿಂದಲೇ ಈ ಕುತ್ತದಿಂದ ಪಾರಾಗಲು ವಿವಿಧ ರೀತಿಯಲ್ಲಿ ಧೈರ್ಯವಾಗಿ ಹೋರಾಡುವೆವು.

**ಜುಲೇಖಾ**—ಖಾನ್ ಸಾಹೇಬ! ಮೊಗಲರ ಕ್ರೂರಪ್ರಭುತ್ವವನ್ನು ತಾಳಲಾರದೆ ಹಿಂದೂಸ್ಥಾನವು ತನ್ನ ಬಾಳು ಬದುಕುಗಳನ್ನು ಕೂಡ ಲೆಕ್ಕಿಸದೆ ಭಯಂಕರ ಚಳುವಳಿಯಲ್ಲಿ ಧುಮುಕಿತು....

**ಕರ್ಣಸಿಂಹ**—ಅನೇಕ ವೀರಾದಿ ವೀರರೂ, ತ್ಯಾಗ ಮೂರ್ತಿಗಳೂ, ರಾಷ್ಟ್ರಪ್ರೇಮಿಗಳೂ ಮಾತೃಭೂಮಿಯ ಸೇವೆಗಾಗಿ ಮಡಿದರು....

**ಭೀಮಸಿಂಹ**—ಮನೆಮಠಗಳನ್ನೂ, ಪತ್ನೀಪುತ್ರರನ್ನೂ, ಆಸ್ತಿಪಾಸ್ತಿಗಳನ್ನೂ ತ್ಯಜಿಸಿ, ಹೊಡೆದಾಡಿ, ಅನೇಕರು ವೀರಸ್ವರ್ಗವನ್ನೂ, ಹಲವರು ಅಡವಿಗಳನ್ನೂ, ಉಳಿದವರು ಸೆರೆಮನೆಯನ್ನೂ ಸೇರಿದರು. ಇಷ್ಟಾದರೂ ಮೊಗಲರ ಪ್ರಾಬಲ್ಯವೇಕೆ ಕಡಿಮೆಯಾಗಲಿಲ್ಲ?....ಐಕಮತ್ಯವು ನಮ್ಮಲ್ಲಿ ಅಳಿಸಿಹೋಯ್ತು, ಅದರಿಂದ.

**ಜುಲೇಖಾ**—ಪರಕೀಯರ ದಾಸ್ಯದಿಂದ ತೊಳಲಿ ಬಳಲಿ ಪಾರಾಗಲು ನಡೆಸುತ್ತಿರುವ ಈ ಸ್ವಾತಂತ್ರ್ಯದ ಪ್ರಚಂಡ ಪ್ರಯತ್ನಕ್ಕೆ ಈ ಐಕಮತ್ಯವು ಆವಶ್ಯಕ....ಇದನ್ನು ತಮ್ಮಂತಹ ಶೂರರು ಮನಗಾಣಬೇಕು....ಅಂದು ಹೊನ್ನಿನ ನಾಡಾಗಿ, ಪ್ರಕೃತಿ ಮಾತೆಯ ಪ್ರೀತಿಯ ನಾಡೆನಿಸಿಕೊಂಡಿದ್ದ ಹಿಂದೂಸ್ಥಾನವು ಇಂದು ಮಣ್ಣಿನ ಪಾಲಾಗಿದೆ. ಅಂದಿನ ಆ ಸ್ಥಿತಿಯನ್ನು ಇಂದಿನ ಪರಿಸ್ಥಿತಿಯೊಂದಿಗೆ ಹೋಲಿಸಿ ನೋಡಿದರೆ ನಿಮ್ಮಂತಹವರ ಎದೆಯು ಬಿರಿಯದೆ? ಖಾ ಸಾಹೇಬ! ತಾವು ಶೂರಸೇನಾಪತಿಗಳು, ದಕ್ಷರು. ತಮ್ಮಂಥವರ ಬೆಂಬಲದಿಂದಲೇ ಇದುವರೆಗೆ ಮೊಗಲರ ಪ್ರತಿಷ್ಠೆ ಹೆಚ್ಚಿತ್ತು........ ತಮಗೀಗ ಆಗಿರುವ ಅಪಮಾನಕ್ಕೆ ಪ್ರತೀಕಾರ ಮಾಡಲು ಮನಸ್ಸಿಲ್ಲವೇ? ಚೈತನ್ಯವಿಲ್ಲವೇ? ತಮ್ಮ ಹೆಸರು ಮಾತ್ರ ಬೇರೆಯಾಗಿದ್ದರೂ, ತಮ್ಮ ಹೃದಯವೂ, ರಕ್ತವೂ ಇನ್ನೂ ರಾಜಪುತ್ರರದಲ್ಲವೆ?

**ಮಹಬತ್**—ಅಹುದು........ನನ್ನಿಂದೇನಾಗಬೇಕು ತಿಳಿಸಿ....ನನ್ನ ಮಗಳ ಮತ್ತು ಅಳಿಯನ ಸುದ್ದಿಯೇನಾಯ್ತು? ಅದನ್ನು ತಿಳಿಯುವವರೆಗೂ ನಾನೇನನ್ನೂ ಹೇಳಲಾರೆ.

**ಜುಲೇಖಾ**—ನೂರ್‌ಜಹಾನಳು ಕರೆಕಳುಹಿದಾಗ ನೀವು ಬರದಿದ್ದುದೂ, ಸಮ್ರಾಟರ ಅನುಮತಿಯಿಲ್ಲದೆ ನಿಮ್ಮ ಮಗಳ ವಿವಾಹ ಜರುಗಿಸಿದುದೂ ನೂರ್‌ಜಹಾನಳಿಗೆ ನಿಮ್ಮ ಮೇಲಿನ ಸೇಡುತೀರಿಸಿಕೊಳ್ಳಲು ಅವಕಾಶವಾಯ್ತು........ ಅದರ ಫಲವಾಗಿ ದರ್ಬಾರಿನಲ್ಲಿ ನೆರೆದ ಜನರೆಲ್ಲರೆದುರಿನಲ್ಲಿ ನಿಮ್ಮಳಿಯನನ್ನೂ ಮಗಳನ್ನೂ ಹಿಡಿತರಿಸಿ, ನಗ್ನಾವಸ್ಥೆಯಲ್ಲಿ ನಿಲ್ಲಿಸಿ ಮುಳ್ಳು ಕೋರಡೆಯಿಂದ ಹೊಡೆಸಿದರು. ಅವರ ಆಸ್ತಿಪಾಸ್ತಿಯೆಲ್ಲವೂ ಬೊಕ್ಕಸಕ್ಕೆ ಸೇರಿತು....ಅವರು ಸೆರೆಮನೆ ಸೇರಿದರು....

**ಮುಹಬತ್**—(ಹಲ್ಲು ಕಡಿಯುತ್ತ, ಕಣ್ಣು ಕೆಂಪೇರುತ್ತಿರಲು) ....ಇದರೊಡನೆಯೇ ಜಹಾಂಗೀರ್—ನೂರ್‌ಜಹಾನರು ತಮ್ಮ ಗೋರಿಯನ್ನೂ ಕಟ್ಟಿಕೊಂಡರು....(ಸ್ವಲ್ಪಕಾಲ ಎಲ್ಲರೂ ಮೌನ).... ನನ್ನಿಂದಾಗಬೇಕಾದುದೇನು....?

**ಜುಲೇಖಾ**—ನಿಮ್ಮ ರಜಪೂತ ಸೈನ್ಯ ಬಲವೆಷ್ಟು?....

**ಮುಹಬತ್**—೫ ಸಹಸ್ರ ರಾಹುತರು.

**ಜುಲೇಖಾ**—ಸಾಕು....ಈಗ ಕಿವಿಗೊಡಿ....ಸಮ್ರಾಟ ಸಮ್ರಾಜ್ಞಿಯರು ನಿಮ್ಮ ಸುಭೆಯ ಬಂಡಾಯವನ್ನಡಗಿಸಿ ನಿಮ್ಮನ್ನು ಶಿಕ್ಷಿಸಲು ಇಲ್ಲಿಂದ ನಾಳಿದ್ದು ಸೈನ್ಯ ಸಮೇತರಾಗಿ ಖುದ್ದಾಗಿ ಹೊರಡುವರು....ಹುಣ್ಣಿಮೆಯ ದಿನ ಬೆಹಾತ್ ನದಿಯನ್ನು ದಾಟಿ ಕಾಬೂಲನ್ನು ಸೇರುವುದೆಂದು ನಿಷ್ಕರ್ಷಿಸಿದ್ದಾರೆ.... ಬೆಹಾತ್ ನದಿಯ ಸೇತುವೆಯನ್ನು ಸೈನ್ಯವೆಲ್ಲ ಮುಂದಾಗಿ ದಾಟುವ ವರೆಗೂ ಸಮ್ರಾಟ-ಸಮ್ರಾಜ್ಞಿಯರು ರಾಹುಟಿಯನ್ನು ಬಿಟ್ಟು ಹೊರಡುವುದಿಲ್ಲ....ನೀವು ಆ ಸ್ಥಳದಲ್ಲಿ ಮುಂದಾಗಿ ಸೈನ್ಯಸಮೇತರಾಗಿ ಅಡಗಿದ್ದು ಸಮ್ರಾಟರ ಸೈನ್ಯವು ಸೇತುವೆಯಿಂದ ಪಾರಾಗುತ್ತಲೇ ನೀವು ಮುಂದೆ ನುಗ್ಗಿ ಸೇತುವೆಯನ್ನು ಸುಟ್ಟು, ಆ ಸೈನ್ಯವು ಹಿಂತಿರುಗಲು ಅವಕಾಶವಾಗದಂತೆ ಮಾಡಿ ಸಮ್ರಾಟ-ಸಮ್ರಾಜ್ಞಿಯರಿಬ್ಬರನ್ನೂ ಸೆರೆಹಿಡಿಯಬೇಕು....ತಿಳಿಯಿತೆ ?

**ಮುಹಬತ್**—ಅನಂತರ ?

**ಜುಲೇಖಾ**—ನಾನು ಸಾಮ್ರಾಜ್ಞಿಯ ಬಳಿಯಲ್ಲಿ ಅಲ್ಲಿಯೇ ಇರುವೆನಲ್ಲ ? ಮುಂದೆ ಮಾಡಬೇಕಾದುದನ್ನು ತಿಳಿಸುವೆನು.

**ಮುಹಬತ್**—ಅವರನ್ನು ಸೆರೆಹಿಡಿಯುವುದು ನನ್ನ ಭಾರ....ಮತ್ತೇನಾದರೂ ಉಂಟೆ ?

**ಜುಲೇಖಾ**—ಸದ್ಯದಲ್ಲೇನೂ ಇಲ್ಲ....ನಿಮ್ಮ ಸಹಾಯಕ್ಕೆ ರಾಣಾ ಭೀಮಸಿಂಹರೂ ಬರುವರು....ಇನ್ನು ನೀವು ಹೊರಡಬಹುದು. (ಮಹಬತ್‌ಖಾನ, ಭೀಮಸಿಂಹರು ನಮಿಸಿ, ತಾವು ಹೊದ್ದಿದ್ದ ಕಪ್ಪನೆಯ ಬಟ್ಟೆಯನ್ನು ತಲೆಯಮೇಲೆಳೆದುಕೊಂಡು ಕಣ್ಮರೆಯಾಗುವರು.)

**ಜುಲೇಖಾ**—(ಕರ್ಣಸಿಂಹನ ಕಡೆ ತಿರುಗಿ)....ನೀವು ಆ ಸಮಯಕ್ಕೆ ಫಾತೇಪುರ್ ಸಿಕ್ರಿಯಲ್ಲಿನ ಹಣಸಹಾಯದಿಂದಲೂ, ಇಲ್ಲವೇ ಶಸ್ತ್ರಸಹಾಯದಿಂದಲೂ ಆಗ್ರಾ-ದೆಹಲಿಗಳನ್ನು ವಶಪಡಿಸಿಕೊಂಡು ರಾಜಮನೆತನದವರೆಲ್ಲರನ್ನೂ ನಯಭಯಗಳಿಂದ ಶರಣಾಗುವಂತೆ ಮಾಡಬೇಕು....ತಿಳಿಯಿತೆ ?

**ಕರ್ಣಸಿಂಹ**—ಆಜ್ಞೆ....ಅಜಿತಸಿಂಹರು ?

**ಜುಲೇಖಾ**—ಮಹಾರಾಣಾಜಿ....ಅಂಬರದ ಅಜಿತಸಿಂಹರೂ ಮಾರವಾರದ ಅನಿಲಸಿಂಹರೂ ನೂರ್‌ಜಹಾನಳು ಒಡ್ಡಿದ ಬಲೆಗೆ ನೊಣಗಳಂತೆ ಬಿದ್ದರು....ಅವಳಾಗಲೇ ಅವರಿಗೆ ವಿಶೇಷ ಗೌರವವನ್ನಿತ್ತು ಅವರಿಂದ ರಾಜನಿಷ್ಠೆಯ ಪ್ರತಿಜ್ಞೆಮಾಡಿಸಿಕೊಂಡಳು. ಅವರಾಸೆ ಬಿಡಿ. ಷಹಜಾದಾ ಖುಸ್ರುವು ಗ್ವಾಲಿಯರ್ ಕೋಟೆಯ ಬಂಧನದಿಂದ ತಪ್ಪಿಸಿಕೊಂಡು ಸೈನ್ಯಸಮೇತನಾಗಿ ಇತ್ತ ಬರುವನೆಂದು ಸುದ್ದಿ ಹರಡಿಸಿ.

**ಕರ್ಣಸಿಂಹ**—ಖುರುಮನು ಬೇಟೆಗೆಂದತ್ತ ಹೋಗಿದ್ದಾಗಲೇ ಖುಸ್ರುವು ತೀರಿಕೊಂಡನಲ್ಲ ?

**ಜುಲೇಖಾ**—ಚಿಂತೆಯಿಲ್ಲ....ನೀವು ಸುದ್ದಿ ಹರಡಿಸಿ....

**ಕರ್ಣಸಿಂಹ**—ತಮ್ಮಪ್ಪಣೆಯಂತೆ. ಫಾತೇಪುರ್‌ಸಿಕ್ರಿಯ ಭೂತಗಳಂತೆಯೇ ಇದೂ ಹರಡುವುದು.

**ಜುಲೇಖಾ**—ನೂರ್‌ಜಹಾನಳ ಕಿವಿಗೆ ಫಾತೇಪುರ್‌ಸಿಕ್ರಿಯ ಭೂತಗಳ ಸುದ್ದಿ ಮುಟ್ಟಿದೆ. ಅದರ ಶೋಧನೆಗೆ ಬಂದ ಒಬ್ಬ

ರಾಜಪುತ್ರನು ಸತ್ತುದನ್ನು ಕೇಳಿ ನಿಮ್ಮಿಬ್ಬರ ನಾಶವೂ ಅದೇ ರೀತಿಯಲ್ಲಾಗಲೆಂದು ಭೀಮಸಿಂಹರನ್ನೂ ನಿಮ್ಮನ್ನೂ ಕಳುಹಿದಳು....ಅದಕ್ಕಾಗಿಯೇ....ನಾನು ನಿಮ್ಮಿಬ್ಬರಿಗೂ ಗೋಪ್ಯವಾಗಿರಲು ಹೇಳಿದುದು....ಈಗ ನೀವಿಬ್ಬರೂ ಅದೇ ರಾಜಪುತ್ರನ ಹಾದಿ ಹಿಡಿದಿರೆಂದು ನೂರ್‌ಜಹಾನಳಿಗೆ ತಿಳುಹಿಸುತ್ತೇನೆ....ಅದಕ್ಕೆ ಸಹಾಯವಾಗಲು ದೆಹಲಿಯ ಬಾಗಿಲಲ್ಲಿ ಮತ್ತೆರಡು ಯಾವುದಾದರೂ ಅನಾಥಶವಗಳನ್ನು ಹಾಕಿಸಿದ್ದು, ಅನಂತರ ಶೀಘ್ರವಾಗಿ ಅವುಗಳನ್ನು ನದಿಯ ಪಾಲು ಮಾಡಿಬಿಡಿ....

**ಕರ್ಣಸಿಂಹ**—....(ತಲೆಬಾಗುವನು) ....

**ಜುಲೇಖಾ**—ನೂರ್‌ಜಹಾನಳೀಗ ತನ್ನಳಿಯ ಷಹಜಾದಾ ಷಹರಿಯರ್‌ನಿಗೆ ಪಟ್ಟಕಟ್ಟಿಸುವ ಸಂಧಾನ ನಡೆಸುತ್ತಿರುವಳು.... ಅದಕ್ಕಾಗಿ ಖುರುಮನನ್ನು ಕೊಲ್ಲಿಸಲೂ ಹೇಸಳು........ ಷಹಜಾದಾ ಖುರುಮನನ್ನು ಮೇವಾರದಲ್ಲಿ ಸುರಕ್ಷಿತವಾಗಿಡಿ ........(ಕರ್ಣಸಿಂಹರೂ, ಜುಲೇಖೆಯೂ ಮೆಲ್ಲನೆ ಮುಂದು ವರಿಯುತ್ತ) ....ಮಹಬತ್‌ಖಾನನಮೇಲೆ ಪೂರ್ಣ ವಿಶ್ವಾಸ ವಿಡಬೇಡಿ....ಒಮ್ಮೆ ದ್ರೋಹ ಬಗೆದವನು ಮತ್ತೊಮ್ಮೆ ದ್ರೋಹವೆಣಿಸದಿರಲಾರ....ನಮ್ಮ ಕಾರ್ಯಸಿದ್ಧಿಗೆ ಅವನನ್ನೆಷ್ಟು ನಂಬಬೇಕೋ ಅಷ್ಟೇ ಅವನ ಮೇಲೆ ಭರವಸೆಯಿಟ್ಟು, ಉಪಯೋಗಿಸಿಕೊಳ್ಳುವುದು ಕ್ಷೇಮ....ಈ ಬಗ್ಗೆ ಎಚ್ಚರಿಕೆ ಯಿಂದಿರಲು ಭೀಮಸಿಂಹರಿಗೆ ತಿಳುಹಿಸಿ....

(ಮಾತನಾಡುತ್ತಾ ಡುತ್ತ ಮರೆಯಾಗುವರು)

---

## ದೃಶ್ಯ ೨

[ ಪುಷ್ಪಗೃಹದಲ್ಲಿ ಗಾದಿಯೊಂದರ ಮೇಲೆ ನೂರ್‌ಜಹಾನಳು ಮಲಗಿ ಯೋಚನಾಮಗ್ನಳಾಗಿರುವಳು. ಜುಲೇಖೆಯು ಮೆಲ್ಲನೆ ಸದ್ದಿಲ್ಲದೆ ಬಂದು ಅವಳ ಮಗ್ಗಲಲ್ಲಿ ನಿಲ್ಲುವಳು. ಕ್ಷಣಕಾಲಾನಂತರ ನೂರ್‌ಜಹಾನಳು ಬೆಚ್ಚಿ ಎಚ್ಚತ್ತು, ನಿಟ್ಟಿಸಿ ನೋಡಿ, ಆಮೇಲೆ ಮೆಲ್ಲನೆದ್ದು ದಿಂಬಿಗೊರಗಿ ನಗುಮೊಗದಿಂದ ]

**ನೂರ್‌ಜಹಾನ್**—ನನ್ನ ಜುಲೇಖೆಯೇನು ಸುದ್ದಿ ತಂದಳು ?

**ಜುಲೇಖಾ**—ಜುಲೇಖೆಯೆಂದಿಗೂ ಕೃತಕಾರ್ಯಳಾಗದೆ ಬಂದಿಲ್ಲ ಸಮ್ರಾಜ್ಞಿ....

**ನೂರ್**—ನೀನು ಚತುರೆ ಜುಲೇಖಾ....ಆ ಮೂರ್ಖರು ಹೇಳುವುದನ್ನು ನಾನು ನಂಬಲಾರೆ....ಅನೇಕವೇಳೆ ದರ್ಬಾರಿಗೆ ಬರುವ ಸುದ್ದಿಗಳಿಗೆಲ್ಲ ಬುಡವೇ ಇರುವುದಿಲ್ಲ........ಹೇಳು........ ಷಹಜಾದಾ ಖುಸ್ರುವಿನ ಬಗ್ಗೆ ನಿಜವಾದ ಸಂಗತಿಯೇನು? (ಎಂದು ಹುಬ್ಬು ಗಂಟಿಕ್ಕುವಳು)

**ಜುಲೇಖಾ**—(ತಟ್ಟನೆ) ಮೂರು ವರ್ಷಗಳ ಹಿಂದೆಯೇ ಗ್ವಾಲಿಯರ್ ಕೋಟೆಯ ನಾಯಕನಿಂದ ಕೊಲ್ಲಲ್ಪಟ್ಟನು. ಖುಸ್ರುವಿನಿಂದ ಅಲ್ಲಿ ಬಹಳ ತೊಂದರೆಗವಕಾಶವಾಯಿತೆಂಬುದೇ ಅವನು ಕೊಟ್ಟ ಕಾರಣ.

**ನೂರ್**—ದರ್ಬಾರಿಗೆ ಬಂದ ಸುದ್ದಿಯು ಷಹಜಾದಾ ಖುರುಮನು ಬೇಟೆಯ ನೆಪದಲ್ಲಿ ಅಲ್ಲಿಗೆ ಹೋಗಿ ಖುಸ್ರುವಿನ ಕೊಲೆ ಮಾಡಿದನೆಂದು ಬಂದಿತ್ತು....ನಿನ್ನ ಸುದ್ದಿಯನ್ನು ನೆಚ್ಚಬಹುದೆ ?

**ಜುಲೇಖಾ**—ಖಂಡಿತವಾಗಿಯೂ, ಬೇಗಂಸಾಹಿಬಾ....ಗ್ವಾಲಿಯರಿಗೆ ನಂಬಿಕಸ್ತನಾದ ಭೃತ್ಯನೊಬ್ಬನನ್ನು ಕಳುಹಿಸಿದ್ದೆ.

**ನೂರ್**—ನೀನು ಹಿಂದೆ ಹೇಳುತ್ತಿದ್ದುದು ಅಕ್ಷರಶಃ ಸತ್ಯ, ಜುಲೇಖಾ! ದರ್ಬಾರಿಗೆ ನಂಬಲರ್ಹವಾದ ಸುದ್ದಿ ಬರುವುದೇ ಅಪರೂಪ ....ನನಗೆ ನಿನ್ನ ವಿಶ್ವಾಸಪೂರ್ಣ ಮೈತ್ರಿಯಿಂದೆಷ್ಟು ಸಹಾಯವಾಗುತ್ತಿದೆಯೆಂಬುದನ್ನು ನೀನರಿಯೆ, ಜುಲೇಖಾ.... (ಜುಲೇಖೆಯ ಮುಖವು ಕೆಂಪೇರಲು, ತಲೆತಗ್ಗಿಸುವಳು)........ ಹಾಗಾದರೆ ಖುಸ್ರುವು ಗ್ವಾಲಿಯರಿನಿಂದ ತಪ್ಪಿಸಿಕೊಂಡು ಸೈನ್ಯಸಮೇತನಾಗಿ ಆಗ್ರದಮೇಲೆ ಧಾಳಿನಡೆಸಲು ಬರುತ್ತಿರುವುದು ಶುದ್ಧ ಸುಳ್ಳಾಯ್ತು........ದೆಹಲಿಯ ದ್ವಾರದಬಳಿ ಕಂಡುಬಂದ ಕ್ರೂರ ಕೊಲೆಯ ವಿಷಯವೇನಾದರೂ ತಿಳಿಯಲು ಸಾಧ್ಯವಾಯ್ತೆ?

**ಜುಲೇಖಾ**—ಬೇಗಂಸಾಹೇಬರ ದಯೆಯಿಂದ ನಂಬಿಕಸ್ತರಾದ ನೂರಾರು ಗೂಢಚಾರರು ನನ್ನ ಹತೋಟಿಯಲ್ಲಿದ್ದಾರೆ.... ಅವರಲ್ಲೊಬ್ಬಳನ್ನು ಕಳುಹಿಸಿದ್ದೆ............ಸ್ವಲ್ಪಕಾಲಕ್ಕೆ ಹಿಂದೆಯೇ ಅವಳು ಬಂದಳು.

**ನೂರ್**—ಅವಳೇನನ್ನುವಳು? ಎಲ್ಲವೂ ಸುಳ್ಳೆ? ಎಳ್ಳಷ್ಟೂ ನಿಜವಿಲ್ಲವೆ?

**ಜುಲೇಖಾ**—ಎಲ್ಲವೂ ಸುಳ್ಳಲ್ಲ....ಸ್ವಲ್ಪ ಸತ್ಯಾಂಶವಿದೆ....ಆದರೆ ಜನರ ಬಾಯಿಂದ ಬಾಯಿಗೆ ಹೋಗುವಾಗ ಇಲಿಯು ಹುಲಿಯಾಗುವುದು.

**ನೂರ್**—ದೆಹಲಿಯ ದ್ವಾರದಲ್ಲಿ ಶವಗಳು ಕಾಣಿಸಿಕೊಂಡದ್ದು ಸತ್ಯವಾದ ಹಾಗಾಯ್ತು.

**ಜುಲೇಖಾ**—ಅದೂ ಎರಡು ತಿಂಗಳ ಹಿಂದೆ ನಗ್ನಾವಸ್ಥೆಯಲ್ಲಿ ಬಿದ್ದಿದ್ದ ಒಬ್ಬ ಸುಂದರ ತರುಣನ ಶವವನ್ನು ಕಂಡಿದ್ದರು. ಜನರಷ್ಟಕ್ಕೇ ನೂರಾರು ಕಂಡವರಂತೆ ಸುದ್ದಿ ಹರಡಿದರು.

**ನೂರ್**—ಹಾಗಾದರೆ ಕಂಡುದು ಒಂದೇ ಶವವೇ?

**ಜುಲೇಖಾ**—ಹೌದು, ಬೇಗಂ ಸಾಹಿಬಾ! ಮೊದಲು ಕಂಡದ್ದು ಒಂದೇ; ಆದರೆ ಮೂರನೆಯ ತಿಂಗಳು ಅದೇ ದಿನದಲ್ಲಿ ಅದೇ ಸ್ಥಿತಿಯಲ್ಲಿ ಮತ್ತೊಂದು ಕಾಣಿಸಿತು.... ಈ ವಿಚಿತ್ರವು ತಾಳಿಯಾದರೂ ದೆಹಲಿಯಂತಹ ದೊಡ್ಡ ಸ್ಥಳಕ್ಕೆ ಇದು ಹೊಸದಲ್ಲ.

**ನೂರ್**—(ಗಂಭೀರವದನಳಾಗಿ) ....ಹೌದು....ಅದು ನಿಜ.

**ಜುಲೇಖಾ**—ನನ್ನ ಗೂಢಚಾರಳು ದೆಹಲಿಯನ್ನು ಸೇರಿದ ದಿನವೂ ಅದೇ ರೀತಿ ಒಂದು ಶವವನ್ನು ನೋಡಿದಳಂತೆ.

**ನೂರ್**—(ಆಶ್ಚರ್ಯ ಚಕಿತಳಾಗಿ) ಜನಗಳು ಅಕಾರಣರಾಗಿ ಭೀತರಾಗಿಲ್ಲವೆಂದು ನನಗೆ ತೋರುವುದು.

**ಜುಲೇಖಾ**—ನೂರಾರಲ್ಲ—ಕೇವಲ ಮೂರೇ, ಬೇಗಂ ಸಾಹಿಬಾ! ಆದರೆ ಈ ಸಲ ಯಾರೂ ಅರಿಯದ ಮುಖ್ಯ ಸುದ್ದಿಯೊಂದು ತಮಗೆ ಬಂದಿದೆ.

**ನೂರ್**—(ಕುತೂಹಲದಿಂದ)....ಅದೇನು ಹೇಳು, ಜುಲೇಖಾ?

**ಜುಲೇಖಾ**—(ಧ್ವನಿಯಿಳಿಸಿ)....ಈ ಸಲ ಕೊಲೆಮಾಡಲ್ಪಟ್ಟವನು ಮೇವಾರದ ಮಹಾರಾಣನು, ಕರ್ಣಸಿಂಹ!

**ನೂರ್**—(ಸಂತೋಷಾತುರಗಳಿಂದ)....ಇದು ನಿಜವೇ? ಕರ್ಣಸಿಂಹನೆಂದೇ ಹೇಗೆ ಗೊತ್ತು?

**ಜುಲೇಖಾ**—ನಾನು ಕಳುಹಿಸಿದ್ದ ಗೂಢಚಾರನು ಬಹಳ ಕುಶಲಮತಿ....ಕರ್ಣಸಿಂಹನನ್ನು ಚೆನ್ನಾಗಿ ಬಲ್ಲನು. ಶವವು ಯಮುನೆಯ ಪಾಲಾಗುವ ಮುಂಚೆ ಅದು ಕರ್ಣಸಿಂಹರದೇ ಎಂದು ಸ್ಥಿರಮಾಡಿಕೊಂಡನಂತೆ.

**ನೂರ್**—ನನ್ನ ಪಥದಲ್ಲಿನ ಮುಳ್ಳೊಂದು ನಾಶವಾಯ್ತು.

**ಜುಲೇಖಾ**—ಖಂಡಿತವಾಗಿಯು.

**ನೂರ್**—ಹಾಗೆಯೇ ಜಯಪುರದ ಅಜಿತಸಿಂಹನೂ ಹಾಗಾದರೆ....

**ಜುಲೇಖಾ**—ತಮ್ಮ ಇಚ್ಛೆಯಂತೆ ಬಾದಷಹರು ಅವನನ್ನೂ ಫಾತೇಪುರ ಸಿಕ್ರಿಗೆ ಕಳುಹಿಸಿದರು....

**ನೂರ್**—ಹೌದು....ಆದರದೇಕೆಂದು ಬಾದಷಹರರಿಯರು.

**ಜುಲೇಖಾ**—ತಿಳಿಸಬಹುದಾಗಿತ್ತಲ್ಲವೇ ?

**ನೂರ್**—ಇಲ್ಲ—ಜುಲೇಖಾ ! ಅದಕ್ಕಿನ್ನೂ ಸಮಯ ಕೂಡಿಲ್ಲ ...

**ಜುಲೇಖಾ**—ಭೀಮಸಿಂಹರೂ, ಮಹಬತ್‌ಖಾನರೂ ಒಂದಾಗಿ ಒಳಸಂಚು ನಡೆಸುತ್ತಿರುವರೆಂದು ಖಂಡಿತವಾಗಿಯೂ ಹೇಳುವಿರಾ ?

**ನೂರ್**—ಬಹಳ ಹಿಂದಿನಿಂದಲೂ ನನಗಾ ಅನುಮಾನವಿದೆ....ಹೇಗಾದರೂ ಈಗಲಿಂದ ಎಚ್ಚರಿಕೆಯಿಂದಿರುವುದೊಳ್ಳೆಯದು.

**ಜುಲೇಖಾ**—ಹಿಂದೂ ಮಾತೆಯ ಹೊಟ್ಟೆಯಲ್ಲಿ ಹುಟ್ಟಿದವನು ಸಿಂಹಾಸನವನ್ನೇರುವುದು ಖಂಡಿತವಾಗಿಯೂ ತಮಗೆ ಸಮ್ಮತವಿಲ್ಲದ ಮಾತಲ್ಲವೇ ?

**ನೂರ್**—ಹಾಗೆಯೇ ಎಂದಲ್ಲ !.... ಹೇಳಲಾರೆ.

[ ಆ ಸಮಯಕ್ಕೆ ಹೊರಗಿನಿಂದ ಕಲಕಲ ಶಬ್ದವೇಳುವುದು. ದಾಸಿಯೊಬ್ಬಳೋಡಿ ಬಂದು ನಮಿಸಿ, ತಲೆತಗ್ಗಿಸಿರುವಳು ]

**ನೂರ್**—ಏನದು ಸದ್ದು ?

**ದಾಸಿ**—...........

**ನೂರ್**—(ಸಿಟ್ಟಿಗೆದ್ದು) ಮಾತನಾಡಲಾಗದಿದ್ದರೆ ಇಲ್ಲಿಗೇಕೆ ಬಂದೆ? ,...ಜುಲೇಖಾ! ಖೋಜಾ ಮಸ್ರೂವಿನ ಬಳಿಗಿವಳನ್ನು ಕಳುಹು....

**ದಾಸಿ**—(ಮತ್ತೆ ಅಡ್ಡಬಿದ್ದು ನಡುಗುತ್ತ, ತೊದಲುತ್ತಿರುವಳು)

**ನೂರ್**—ಏನಾಯ್ತು ಹೇಳು ?

**ದಾಸಿ**—ಷಹಜಾದಾ....

**ನೂರ್**—ಷಹಜಾದಾಗೇನಾಯ್ತು?

**ದಾಸಿ**—ಷಹಜಾದಾ ಖುರುಮರು ಓಡಿಹೋದರು.

**ನೂರ್**—(ಸಮಾಧಾನ ಚಿತ್ತಳಾಗಿ)....ತೊಲಗು....

[ದಾಸಿಯೋಡುವಳು. ನೂರ್‌ಜಹಾನಳು ಮುಂದಿನ ಆಹ್ಲಾದಕರ ದೃಶ್ಯ ನೋಡುತ್ತ ಮೈಮರೆಯುವಳು]

**ಜುಲೇಖಾ**—ಸಮ್ರಾಜ್ಞಿಗಿದು ಮೊದಲಿನಿಂದಲೂ ತಿಳಿದಿತ್ತೆಂದು ತೋರುವುದು.

**ನೂರ್**—(ಜುಲೇಖೆಯ ಮುಖವನ್ನೊಮ್ಮೆ ತೀಕ್ಷ್ಣವಾಗಿ ದೃಷ್ಟಿಸಿ)........ ಅಹುದು, ತಿಳಿದಿತ್ತು....ನನ್ನ ದರ್ಬಾರಿನಲ್ಲಿ ಬುದ್ಧಿವಂತನಾದವನು ಯಾವನಾದರೊಬ್ಬನು ಇದ್ದಿದ್ದರೂ ಷಹಜಾದಾ ಖುರುಮನು ನಮ್ಮ ಹಗೆಗಳ ಹಿಂದೆ ಬಿದ್ದಿರುವನೆಂಬುದನ್ನು ಎಂದೋ ತಿಳಿಯುತ್ತಿದ್ದನು........ಹಿಂದೆಲ್ಲ ಖುರುಮನು ದರ್ಬಾರಿನಿಂದ ದೂರವಿರುತ್ತಿದ್ದುದೇಕೆ ?....ನಮ್ಮ ಹಗೆಗಳೊಡನಿರಲೇ ಅಲ್ಲವೆ? ಅವನು ತಂದೆಯಮೇಲೇ ದಂಗೆ ಏಳಲು ಕಾರಣರಾರು?........ಅದು ನಮ್ಮ ಹಗೆಗಳ ಕಾರಸ್ಥಾನವೇ ಅಲ್ಲವೇ ?....

**ಜುಲೇಖಾ**—ಅಂತಹ ನಮ್ಮ ಹಗೆಗಳಾರು, ಬೇಗಂ ಸಾಹಿಬಾ?

**ನೂರ್**—(ನಿಧಾನವಾಗಿ) ....ಯಾರೆ ?....ಮಾರವಾರವು ನಮ್ಮ ಶತ್ರು. ....ಕರ್ಣಸಿಂಹ—ಭೀಮಸಿಂಹರು ನಮ್ಮ ಆಜನ್ಮ ವೈರಿಗಳು ....ಅಂತೆಯೇ ಧರ್ಮಭ್ರಷ್ಟ ಮಹಬತ್ ಖಾನ....ಈಗಲಾದರೂ ತಿಳಿಯಿತೆ ನಮ್ಮ ಹಗೆಗಳಾರೆನ್ನುವುದು ? (ಜುಲೇಖಿಯು ಏನೋ ಯೋಚಿಸುತ್ತ ನಿಲ್ಲುವಳು)

---

## ದೃಶ್ಯ ೩

[ ಮೊದಲಿನ ನೆಲಮಾಳಿಗೆಯಲ್ಲಿ ಮುಸಕುಮುಸಕಾದ ಬೆಳಕು. ಜುಲೇಖೆ ಯೂ, ಕರ್ಣಸಿಂಹನೂ ಮಾತನಾಡುತ್ತ ಪ್ರವೇಶಿಸುವರು. ಇಬ್ಬರೂ ಕರಿಯ ಬಟ್ಟೆಗಳನ್ನು ಹೊದ್ದಿರುವರು]

**ಕರ್ಣಸಿಂಹ**—....ಆಮೇಲೇನಾಯ್ತು?

**ಜುಲೇಖಾ**—ಅಜಿತಸಿಂಹರನ್ನು ಪದವಿ—ಗೌರವಗಳಿಂದ ಒಲಿಸಿ ಕೊಂಡಂತೆಯೇ ಭೀಮಸಿಂಹರನ್ನೂ ಸುಲಭವಾಗಿ ಒಲಿಸಿ ಕೊಳ್ಳಬಹುದೆಂದು ತಿಳಿದು ನೂರ್‌ಜಹಾನಳು ಅವರಿಗೆ ಹೇಳಿಕಳುಹಿಸಿದಳು. ಆಗತಾನೆ ಮಹಬತ್‌ಖಾನರೊಡನೆ ಗುಟ್ಟಾಗಿ ಹೊರಡಲೇರ್ಪಡಿಸುತ್ತಿದ್ದ ಭೀಮಸಿಂಹರು ತಾವು ನೂರ್‌ಜಹಾನಳನ್ನು ಕಾಣದೆಯೇ ಹೊರಟುಬಿಟ್ಟರೆ ಸಮ್ರಾಜ್ಞಿಯನ್ನು ಬಹಿರಂಗವಾಗಿ ಧಿಃಕರಿಸಿದಂತಾಗಿ ಕೆಲಸ ಕೆಟ್ಟೀತೆಂಬ ಭಯದಿಂದ ಅವಳನ್ನು 'ದಿವಾನಿ—ಆಮ್'ನಲ್ಲಿ ಕಂಡರು.

**ಕರ್ಣಸಿಂಹ**—ನಮ್ಮ ಕಾರಸ್ಥಾನದ ಬಗ್ಗೆ ನೂರ್‌ಜಹಾನಳ ಮನಸ್ಸಿ ನಲ್ಲೇನಾದರೂ ಸಂದೇಹವಿದ್ದು, ಅದೇ ಈ ಭೆಟ್ಟಿಗೆ ಕಾರಣವಾಗಿರಬಹುದೆ ?

**ಜುಲೇಖಾ**—ಹಾಗಿರಲಾರದು....ಹಿಂದೂ ರಾಜಪುತ್ರರ ಬೆಂಬಲದ ಮೇಲೇ ತಮ್ಮ ಸಿಂಹಾಸನವು ನಿಂತಿದೆಯೆಂಬುದು ಅವಳಿಗೆ ಚೆನ್ನಾಗಿ ಗೊತ್ತು. ಹಿಂದೂ ರಾಜಪುತ್ರರನ್ನು ಅಂತರಂಗ ದಲ್ಲೆಷ್ಟು ದ್ವೇಷಿಸುತ್ತಿದ್ದರೂ ಆ ಒಂದು ಕಾರಣಕ್ಕಾಗಿ ಅದನ್ನು ಬಹಿರಂಗವಾಗಿ ವ್ಯಕ್ತಪಡಿಸದೆ ಎಲ್ಲರನ್ನೂ ವಿವಿಧ ರೀತಿಯಿಂದ ಒಲಿಸಿಕೊಳ್ಳಲು ಪ್ರಯತ್ನಿಸುತ್ತಿರುವಳು.

**ಕರ್ಣಸಿಂಹ**—ಭೀಮಸಿಂಹನಿಗೇನು ಮರ್ಯಾದೆಯನ್ನು ಕಾದಿಟ್ಟಿದ್ದಳು ?

**ಜುಲೇಖಾ**—ಗುಜರಾತಿನ ಸುಭೇದಾರಿಯನ್ನು. ಆದರೆ ಅವರದನ್ನು ಬಹು ನಮ್ರತೆಯಿಂದ ತಿರಸ್ಕರಿಸಿ, ಅವಳು ಅವಡುಗಚ್ಚುವಂತೆ ಮಾಡಿ ಹೊರಟು ಹೋದರು.

**ಕರ್ಣಸಿಂಹ**—ಭೇಷ್........ಸಿಂಹದ ಹೊಟ್ಟೆಯಲ್ಲಿ ಶೃಗಾಲವು ಹುಟ್ಟೀತೆ?

**ಜುಲೇಖಾ**—ಮಹಬತ್‌ಖಾನರ ಬಗ್ಗೆ ಭೀಮಸಿಂಹರನ್ನು ಎಚ್ಚರಿಸಿದಿರಾ ?

**ಕರ್ಣಸಿಂಹ**—ಇಲ್ಲ....ಅವರು ಇಲ್ಲಿಂದ ಹೊರಡುವ ಸಮಯದಲ್ಲಿ ನಾನು ಹತ್ತಿರದಲ್ಲಿರಲಿಲ್ಲ...ಅದೂ ಅಲ್ಲದೆ ನೂರ್‌ಜಹಾನಳಿಂದಿಷ್ಟು ಅಪಮಾನಕ್ಕೆ ಗುರಿಯಾದವನು ನಮಗೆ ದ್ರೋಹ ಮಾಡಲಾರನೆಂದು ಭಾವಿಸಿದೆ....

**ಜುಲೇಖಾ**—ಹಾಗೇಕೆ ತಪ್ಪು ಭಾವನೆಗಳಿಗೊಳಗಾಗುವಿರಿ? ನಾವು ಕೈಗೊಂಡಿರುವ ಕಾರ್ಯದಲ್ಲಿ ಯಾರೊಬ್ಬರ ಸ್ವತಂತ್ರ ಭಾವನೆಗಳಿಗವಕಾಶವಿರಕೂಡದು....ಮತ್ತೊಮ್ಮೆ ಹಾಗಾಗದಿರಲಿ....

**ಕರ್ಣಸಿಂಹ**—(ನಾಚಿಕೆಯಿಂದ ತಲೆತಗ್ಗಿಸಿ)....ಅಪ್ಪಣೆ........ಮಹಬತನ ವಿಚಾರವಾಗೇನೋ ಹೆಚ್ಚಿಗೆ ವಿಷಯಗಳು ತಮ್ಮ ಕಿವಿಗೆ ಬಿದ್ದಿರಬೇಕು....

**ಜುಲೇಖಾ**—ಹೌದು........ಬಿದ್ದಿದೆ....ಷಹಜಾದಾ ಪರ್‌ವೀಜನು ಬಹುಕಾಲದಿಂದ ಅವನ ಕೈಗೊಂಬೆಯಾಗಿದ್ದಾನೆ........ ಅದರಿಂದ ನಮ್ಮ ಕಾರ್ಯವು ಸಿದ್ಧಿಸುವ ಸುಸಮಯದಲ್ಲಿ

ಸರಿಯಾಗಿ ನಮಗವನು ದ್ರೋಹಬಗೆಯಬಹುದು....ಬಹುದೆಂಬ ಮಾತಾದರೂ ಎಚ್ಚರಿಕೆಯಿಂದಿರುವುದು ಕೆಟ್ಟದಲ್ಲ ....ಹಾಗೆಂದು ಭೀಮಸಿಂಹರಿಗೆ ತಿಳುಹಿಸು.

[ಮರೆಯಲ್ಲಿ ಯಾರೋ ನಡೆದು ಬರುತ್ತಿರುವಂತೆ ಕಾಲು ಸಪ್ಪಳವು ಕೇಳಿಬರುವುದು. ಜುಲೇಖ-ಕರ್ಣಸಿಂಹರಿಬ್ಬರೂ ಚಕಿತರಾಗಿ ಆಲಿಸುವರು....]

**ಜುಲೇಖಾ**—ಇದೇನಿದು.... ಈ ವೇಳೆಯಲ್ಲಿ ನೆಲಮಾಳಿಗೆಯ ಮೂಲಕ ಬರುವವರು ಯಾರಿರಬಹುದು?....ಯಾರಾದರಿರಲಿ, ನೀವು ಹೊರಡುವುದು ಕ್ಷೇಮ....ಮತ್ತೆ ಇಲ್ಲಿಗೆ ಬರಬೇಡಿ........ ನನಗೇಕೋ ಅನುಮಾನವಾಗುತ್ತಿದೆ....ಬೇಗ ಹೊರಡಿ.... ಬೇಗ ಹೊರಡಿ....ಸುದ್ದಿ ಏನಿದ್ದರೂ ಫಾತೇಪುರ್ ಸಿಕ್ರಿಗೆ ಕಳುಹಿಸುತ್ತೇನೆ....

[ಕರ್ಣಸಿಂಹನು ಬೇಗ ಮರೆಯಾಗುವನು—ಕತ್ತಲಾಗಿದ್ದೊಂದು ಮೂಲೆಯಲ್ಲಿ ಜುಲೇಖೆಯು ಅಡಗಿಕೊಳ್ಳುವಳು ...ಕರಿಯ ಮೇಲ್ಮುಸುಕನ್ನು ಹೊದ್ದುಕೊಂಡೊಬ್ಬಾತನು ಸರಸರನೆ ಮುಂದೆ ಬಂದು, ಹೋದ ವ್ಯಕ್ತಿಯನ್ನು ಅನುಸರಿಸಬೇಕೆ—ಬೇಡವೆ ಎಂದು ಯೋಚಿಸುತ್ತಿರುವಷ್ಟರಲ್ಲಿ ಸದ್ದಿಲ್ಲದೆ ಹಿಂದಿನಿಂದ ಕೆಲವರು ಬಂದು, ಅವಳ ಮೇಲೊಂದು ಬಟ್ಟೆ ಹಾಕಿ, ಬಂಧಿಸಿ ಹೊತ್ತುಕೊಂಡು ಹೋಗುವರು.]

---

## ದೃಶ್ಯ ೪

[ಶೀಷ್ ಮಹಲಿಗೆ ಸೇರಿದ ವಸ್ತುರಹಿತವಾದೊಂದು ಚಿತ್ರಹಿಂಸೆಯ ಕೋಣೆಯಲ್ಲಿ ಜುಲೇಖೆಯು ತನ್ನ ಕಟ್ಟುಗಳನ್ನೂ, ಮೇಲೆ ಕವಿದಿದ್ದ ಕರಿಯ ಬಟ್ಟೆಯನ್ನೂ ಬಿಚ್ಚಿಕೊಂಡೆದ್ದು, ಕ್ಷಣಕಾಲ ಸುತ್ತಮುತ್ತಲಿನ ಸದ್ದು ಯಾವುದಾದರೂ ಕೇಳಿಬಂದೀತೇ ಎಂದು ಕಿವಿಗೊಟ್ಟು ಕೇಳಿ, ಯೋಚನಾಪರಳಾಗಿ]

**ಜುಲೇಖಾ**—(ತನ್ನಲ್ಲೇ)................ನನ್ನನ್ನೀರೀತಿ ಬಂಧಿಸಿ ತರುವ ಧೈರ್ಯವು ಯಾರಿಗಿದ್ದೀತು?....ನೂರ್‌ಜಹಾನಳಿಗೆಷ್ಟು ಎಲ್ಲರೂ ಅಂಜುವರೋ ಅದಕ್ಕೂ ಹೆಚ್ಚಾಗಿ ಅವಳ ಜತೆಗಾರ್ತಿ ಜುಲೇಖೆಗೆ ಅಂಜುವರು....ನನ್ನ ಶತ್ರುಗಳಿಗೂ ಈ ರೀತಿ ಮಾಡುವ ಎದೆಗಾರಿಕೆಯಿಲ್ಲವೆಂದ ಮೇಲೆ....ಅದೂ ನನ್ನನ್ನು ಈ ಚಿತ್ರಹಿಂಸೆಯ ಕೋಣೆಗೆ ತಂದಿರಿಸಿರುವುದರಿಂದ....ಇದು ಯಾರೋ ಸಾಧಾರಣ ವ್ಯಕ್ತಿಗಳ ಕಾರ್ಯವಲ್ಲವೆನ್ನುವುದು ಸ್ಪಷ್ಟವಾಗಿದೆ....ಈ ಕಾರ್ಯವು ನೂರ್ ಜಹಾನಳಿಗೂ ಸೊಪ್ಪುಹಾಕದವರದಾಗಿರಬೇಕು....ಇಲ್ಲವೇ ನೂರ್‌ಜಹಾನಳಿಂದಲೇ ಪ್ರೇರಿತವಾದುದಾಗಿರಬೇಕು.... ಅಂದಮೇಲೆ ಇದಕ್ಕೆ ಕಾರಣರಾದವರು ನನ್ನ ಚಲನವಲನಗಳ ಮೇಲೆ ಕಣ್ಣಿಟ್ಟು ಅದರಿಂದೇನೂ ಕೃತಕಾರ್ಯರಾಗದೆ ನನ್ನ ಬಾಯಿಂದಲೇ ಸತ್ಯಾಂಶವನ್ನು ಹೊರಡಿಸಿ ತಿಳಿಯಬೇಕೆನ್ನುವ ದೃಷ್ಟಿಯಿಂದ ನನ್ನನ್ನೀ ಕೋಣೆಯಲ್ಲಿ ಬಂಧಿಸಿರುವರೆಂದು ತೋರುವುದು........(ಹುಬ್ಬು ಗಂಟಿಕ್ಕಿ)........ ಒಳ್ಳೆಯದು............ಸರ್ವಸುಂದರಿಯ ಮನೋದಾರ್ಢ್ಯದ ಪರೀಕ್ಷಾಸಮಯವು ಸಮೀಪಿಸಿದಂತಿದೆ....

[ಕೊಠಡಿಯ ಬಾಗಿಲು ತೆರೆಯಲ್ಪಡಲು, ಒಬ್ಬ ವೃದ್ಧ ಫಕೀರನು ಕೋಲೂರಿಕೊಂಡು ಪ್ರವೇಶಿಸುವನು. ಅವನನ್ನು ಕಾಣುತ್ತಲೇ ಜುಲೇಖೆಯು ಚಕಿತಳಾಗಿ ಅವನನ್ನೇ ತೀಕ್ಷ್ಣದೃಷ್ಟಿಯಿಂದ ನೋಡುತ್ತ ತನ್ನ ಮಡಿಲಿ

ನಲ್ಲಿದ್ದ ಗುಪ್ತಕಠಾರಿಗೆ ಕೈಹಾಕುವಳು. ಅದನ್ನು ಕಂಡ ವೃದ್ಧನು, ನಸುನಗುತ್ತ]

**ವೃದ್ಧಫಕೀರ**—ಸರ್ವಸುಂದರಿ! ನೀನು ಕಠಾರಿಯನ್ನೂ, ವಿಷವನ್ನೂ ಸದಾ ನಿನ್ನ ಮಡಿಲಿನಲ್ಲಿಟ್ಟುಕೊಂಡೇ ಓಡಾಡುವಿಯೆಂದು ನನಗೆ ಗೊತ್ತಿದೆ........ಬೇಗಂ ಮಹಲಿನಲ್ಲಿ ತನ್ನ ಸತೀತ್ವ ರಕ್ಷಣೆಗೆ ಹೆಂಗಸಾದವಳು ಹಾಗೆ ನಿನ್ನಂತೆ ಆತ್ಮಹತ್ಯೆಗೆ ವಿಷವನ್ನೂ, ಪಾತಕಿಯ ಸಾವಿಗೆ ಕಠಾರಿಯನ್ನೂ ಬಳಿಯಲ್ಲಿಟ್ಟುಕೊಂಡಿರಬೇಕಾದುದೂ ಸಹಜವೇ ಅಲ್ಲವೆ, ಸರ್ವಸುಂದರಿ ?

**ಜುಲೇಖಾ**—ನಾನು ಸರ್ವಸುಂದರಿಯಲ್ಲ........ಸಮ್ರಾಜ್ಞಿ ನೂರ್ ಜಹಾನಳ ಯಃಕಶ್ಚಿತ ಬಾಂದಿ ಜುಲೇಖೆ....

**ವೃದ್ಧ**—ನಿನ್ನ ಪೂರ್ವಚರಿತ್ರೆಯನ್ನು ನಾನು ಬಲ್ಲೆ.

**ಜುಲೇಖಾ**—ಅರಿತಿರಬಹುದು....ಆದರೆ ಸರ್ವಸುಂದರಿಯು ಸತ್ತು ಬಹು ಕಾಲವಾಯ್ತು........ಈಗ ನಿಮ್ಮೆದುರಿನಲ್ಲಿರುವವಳು ನಿಮ್ಮ ಮತಸ್ಥಳು, ಜುಲೇಖಾ.

**ವೃದ್ಧ**—(ತೀಕ್ಷ್ಣ ದೃಷ್ಟಿಬೀರಿ)....ಅದು ಸತ್ಯವೇ?

**ಜುಲೇಖಾ**—....ಖಂಡಿತ.

[ಕೆಲಕಾಲ ಒಬ್ಬರ ಮುಖವನ್ನೊಬ್ಬರು ಎವೆಯಿಕ್ಕದೆ ನೋಡುವರು. ವೃದ್ಧನು ಗಂಭೀರ, ಆದರೆ ಕಾಠಿಣ್ಯ ಮುಖಭಾವದಿಂದ, ನಿಧಾನವಾಗಿ]

**ವೃದ್ಧ**—ಅಲ್ಲ....ಅದು ಸತ್ಯವಲ್ಲ........ನೀನು ಇನ್ನೂ ಬದ್ವಾನಿನ ಬಳಿಯ ಜಹಗೀರಿಯಲ್ಲಿ ಬೆಳೆದ ಅದೇ ಸರ್ವಸುಂದರಿ....

**ಜುಲೇಖಾ**—(ಕೋಪಗೊಂಡು) ತಾವು ಯಾರೆಂಬುದನ್ನು ನಾನು ಕಾಣೆ....ತಮ್ಮನ್ನು ನೋಡಿದರೆ ಒಬ್ಬ ಸಾಧು ಫಕೀರರಂತೆ

ತೋರುವಿರಿ....ನಿಮ್ಮ ಉದ್ದೇಶವೇನಾದರೂ ಇರಲಿ........
ನನ್ನನ್ನೀರೀತಿಯಾಗಿ ಅಪಹರಿಸಿ ತಂದುದು ಸರಿಯೇ ?

**ವೃದ್ಧ**—ರಾಜಕಾರಣಗಳ ಸಿದ್ಧಿಗಾಗಿ ಕೆಲವು ವೇಳೆ ನಿಂದಾಸ್ಪದವಾದ ರೀತಿಯಲ್ಲೂ ವರ್ತಿಸಬೇಕಾಗುವುದು....ಹಿಂಸಿಸಲೂ ಬೇಕಾಗುವುದು...........ಅನೇಕರಿಗೆ ಶುಭವಾಗುವುದಾದರೆ ಒಬ್ಬರನ್ನು ತೊಂದರೆಗೀಡುಮಾಡುವುದು ನಿಂದ್ಯವಲ್ಲ....

**ಜುಲೇಖಾ**—(ಮುಖವು ಕೆಂಪೇರಲು)....ನಾಳೆ ಬಾದಷಹ ಬೇಗಮರು ಅತಿ ಕ್ರೂರ ಶಿಕ್ಷೆಯನ್ನು ತಮಗೆ ವಿಧಿಸುವರು.

**ವೃದ್ಧ**—(ನಸುನಗುತ್ತ)....ನಾನು ಹೇಳುವುದೆಲ್ಲವನ್ನೂ ಕೇಳಿದಮೇಲೆ ಇದನ್ನು ನೀನು ಯಾರಲ್ಲಿಯೂ ಹೇಳಲಿಚ್ಛಿಸಲಾರೆ....

**ಜುಲೇಖಾ**—ನನ್ನನ್ನೇ ಈ ರೀತಿ ತೊಂದರೆಗೀಡುಮಾಡಿದ ನಿಮ್ಮ ಈ ದುರ್ವರ್ತನೆಯನ್ನು ಸಮ್ರಾಜ್ಞಿಯಿಂದ ಮುಚ್ಚಿಡುವೆನೆಂದು ತಿಳಿದಿರಾ ?

**ವೃದ್ಧ**—ಹೌದು....ಖಂಡಿತವಾಗಿಯೂ ನೀನು ಹೇಳಲಾಗದು........
ನಾನು ನಿನ್ನೊಡನೆ ಮಾತನಾಡಬೇಕಾದುದು ಬಹಳವಿದೆ ...

**ಜುಲೇಖಾ**—ದಯವಿಟ್ಟು ನೀವು ಹೇಳಬೇಕಾದುದನ್ನು ಬೇಗ ಹೇಳಿ ಮುಗಿಸಿ....

**ವೃದ್ಧ**—ನಿನ್ನ ಪೂರ್ವ ಚರಿತ್ರೆಯನ್ನು ನಿನಗೆ ನೆನಪು ಮಾಡಿಕೊಡುವುದರಿಂದ ನನಗೇನಾದರೂ ಒಂದು ಉದ್ದೇಶವಿರಬೇಕಲ್ಲವೆ? ....ನಿಜ ಹೇಳುವುದಾದರೆ....ನೀನು ನಿನ್ನ ಹಿಂದಿನ ವಿಷಯಗಳ್ಯಾವುವನ್ನೂ ಮರೆತಿಲ್ಲ....ಹೆಸರಿಗೆ ಮಾತ್ರ ಜುಲೇಖೆಯಾಗಿರುವೆಯೇ ವಿನಹ........ವಾಸ್ತವತಃ ನೀನಿನ್ನೂ ಅದೇ ಸರ್ವಸುಂದರಿಯೆ........(ಜುಲೇಖೆಯು ಮಾತನಾಡಲೆತ್ನಿಸುವುದನ್ನು ಕಂಡು) ಸುಮ್ಮನಿದ್ದು ನಾನು ಹೇಳುವುದೆಲ್ಲವನ್ನೂ ಕೇಳು

……ಜುಲೇಖಾ!….ನಿನ್ನ ಪತಿಯ ಕೊಲೆಗೆ, ನಿನ್ನವರ ದುಃಸ್ಥಿತಿಗೆ ಕಾರಣರಾದವರ ಮೇಲೆ ಸೇಡು ತೀರಿಸಿಕೊಳ್ಳಲು ನೀನು ಹತ್ತು ಹದಿನೈದು ವರ್ಷಗಳಿಂದಲೂ ಭೂಮ್ಯಾಕಾಶ ಗಳನ್ನೊಂದು ಮಾಡುತ್ತಿರುವೆ….ನಿನ್ನ ಸಹಾಯವಿಲ್ಲದಿದ್ದರೆ ಷೇರ್ ಆಫ್ಘಾನನೂ ಆ ಬಗೆಯ ಸಾವಿಗೆ ಗುರಿಯಾಗುತ್ತಿರ ಲಿಲ್ಲ….

**ಜುಲೇಖಾ**—ನನ್ನ ಹಿಂದಿನ ಕಥೆಯೆಲ್ಲವೂ ತಮಗೆ ಚೆನ್ನಾಗಿ ತಿಳಿದಿ ರುವ ಹಾಗಿದೆ….ಹೌದು….ಆ ನೀಚನೇ ನನ್ನ ಪತಿಯ ಕೊಲೆಗೆ ಕಾರಣನು, ನನ್ನ ಮತಭ್ರಷ್ಟತ್ವಕ್ಕೆ ಕಾರಣನು…. ನಾನವನ ಪತ್ನಿಯ ದಾಸಿಯಾಗಲು ಕಾರಣನು….ನನ್ನ ಮಾವನವರು ಈ ಅಪಮಾನವನ್ನು ಸಹಿಸಲಾರದೆ ನನ್ನ ಮುದ್ದು ಮಗಳೊಡನೆ ಆ ಊರನ್ನೇ ಬಿಟ್ಟು ಹೋದರು…. ನಾನು ಷೇರ್ ಅಫ್ಘಾನನ ಸಾವಿಗೆ ಸಹಾಯ ಮಾಡಿದ್ದರೆ ಅದರಿಂದ ನಾನು ಪಾಪ ಮಾಡಿದಂತಾಗಲಿಲ್ಲ….

**ವೃದ್ಧ**—ಅದು ಸರಿ….ಅದಕ್ಕಾಗಿ ನಾನು ನಿನ್ನನ್ನು ದೋಷಿಯೆನ್ನು ವುದೂ ಇಲ್ಲ….ಆದರೆ ನಿನ್ನ ದ್ವೇಷವು ಅಷ್ಟಕ್ಕೇ ಶಮನವಾ ಗಿಲ್ಲವೆಂದು ಹೇಳಲಿಚ್ಛಿಸುತ್ತೇನೆ….

**ಜುಲೇಖಾ**—ನೀವು ಹೇಳುವುದೇ ನನಗರ್ಥವಾಗದು….

**ವೃದ್ಧ**—ಅರ್ಥವಾಗುತ್ತಿದೆ ಜುಲೇಖಾ….ಆದರೆ ಅದನ್ನು ನೀನು ವ್ಯಕ್ತಪಡಿಸುತ್ತಿಲ್ಲ ಅಷ್ಟೆ….

**ಜುಲೇಖಾ**—ಹಾಗಾದರೆ ನಾನಿನ್ನು ಮಾತಾಡಿ ಪ್ರಯೋಜನವಿಲ್ಲ…. ನೀವು ಹೇಳಬೇಕೆಂದಿದ್ದುದು ಹೇಳಿಯಾಯ್ತೆ?

**ವೃದ್ಧ**—ಮೊಗಲರಾಳ್ವಿಕೆಯನ್ನು ಹಿಂದೂ ದೇಶದಲ್ಲಿ ನಿರ್ಮೂಲ ಮಾಡಲು ನೀನು ನಿಶ್ಚೈಸಿರುವೆ; ಅದಕ್ಕಾಗಿ ನಿನ್ನ ವೇಷ

ಭೂಷಣಗಳನ್ನೂ, ನಡೆ-ನುಡಿಗಳನ್ನೂ ಮಾರ್ಪಡಿಸಿಕೊಂಡಿರುವೆ....ಅದರ ಸಾಧನೆಗಾಗಿಯೇ ಈ ಹತ್ತು ವರ್ಷಗಳಿಂದ ನಿನ್ನ ಶಕ್ತಿಯನ್ನೆಲ್ಲ ವೆಚ್ಚಮಾಡುತ್ತಿರುವೆ. ನೂರ್‌ಜಹಾನಳ ಬಗ್ಗೆ ಮೇಲೆ ನೀನೆಷ್ಟು ಪ್ರೇಮವನ್ನು ತೋರ್ಪಡಿಸಿಕೊಂಡರೂ, ಗುಟ್ಟಾಗಿ ಅವಳ ಸರ್ವನಾಶಕ್ಕೆ ಹಾದಿ ಹುಡುಕುತ್ತಿರುವೆ....ಹಿಂದೂ ದೇಶದಲ್ಲಿ ಮೊಗಲರಾಳ್ವಿಕೆ ನೆಲಸಮಮಾಡಿ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬುದೊಂದೇ ನಿನ್ನ ಜೀವನವ ಗುರಿ; ಅಲ್ಲವೆ.... ಸರ್ವಸುಂದರಿ ?

**ಜುಲೇಖಾ**—ನೀವು ಯಾವುದೋ ಕನಸು ಕಾಣುತ್ತಿರುವಿರಿ.... ಇಲ್ಲವೇ ನಿಮ್ಮ ವಯಸ್ಸಿಗೆ ತಕ್ಕಂತೆ ಅರುಳು-ಮರುಳಿರಬಹುದು.... ನೀವು ಹೇಳುವಂತಹ ದೊಡ್ಡ ದೊಡ್ಡ ಕಾರ್ಯಗಳಿಗೆ ನನ್ನ ಸಣ್ಣ ತಲೆಯಲ್ಲಿ ಸ್ಥಾನವೇ ಇಲ್ಲ....ಅರ್ಥವಾಗುವುದೂ ಇಲ್ಲ....

**ವೃದ್ಧ**—ಬರ್ದ್ವಾನಿನಿಂದ ಹೊರಡುವಾಗ ಅಲ್ಲಿಯ ಜನಾನೆಯಲ್ಲಿದ್ದೆಲ್ಲ ಸುಂದರ ಹಿಂದೂ ಸ್ತ್ರೀಯರನ್ನೂ ನಿನ್ನೊಡನೆ ಆಗ್ರಾಕ್ಕೆ ಕರೆದೊಯ್ಯಬೇಕಾಗಿದ್ದಾಗ ಅವರ ಗುಂಪೆಲ್ಲ ಒಟ್ಟಿಗೆ ಆತ್ಮಹತ್ಯೆಮಾಡಿಕೊಳ್ಳಲು ಆಗ ನೀನು ಏನೆಂದು ಶಪಥ ಮಾಡಿದೆ ?

**ಜುಲೇಖಾ**—(ಮುಖವು ಬೀಳುಪೇರಿದರೂ, ಕಂಗೆಡದೆ) ......ಅವರೆಲ್ಲರೂ ನಿರಪರಾಧಿಗಳು....ಅವರು ರೂಪವತಿಯರಾಗಿ ಹುಟ್ಟಿದುದೇ ಅವರ ತಪ್ಪೆ?....ಆ ರೂಪಕ್ಕೆ ಮರುಳಾಗಿ ಅಬಲೆಯರ ಮನೆಗಳಿಗೆ ನುಗ್ಗಿ ವೃದ್ಧರು-ಮಕ್ಕಳು ಎನ್ನುವ ಕನಿಕರವೂ ಇಲ್ಲದೆ ಕೊಲೆಮಾಡಿ ಆ ಹೆಂಗಸರನ್ನು ಬಂದಿಗಳಾಗೊಯ್ದು ನಿಮ್ಮವರು ತಮ್ಮ ವಿಷಯದಾಸೆ ತೀರಿಸಿಕೊಂಡರು....ಆ

ಸ್ತ್ರೀಯರಿಗೆ ಜೀವನವು ಅಸಹ್ಯವಾಯ್ತು....ಪ್ರಾಣಬಿಡಲೂ ಸ್ವಾತಂತ್ರ್ಯವಿಲ್ಲದಂತೆ ಅವರ ಮೇಲೆ ಸರ್ಪಕಾವಲಿತ್ತು....ಆ ಹೀನಸ್ಥಿತಿಯನ್ನು ತಿಳಿಯಲಾರಿರಿ........ಅವರನ್ನೆಲ್ಲ ನನ್ನ ವಶಕ್ಕೆ ಕೊಟ್ಟಾಗ ಅವರು ಗೋಳಿಡುತ್ತ ನನ್ನ ಮರೆ ಹೊಕ್ಕರು........ಮನಸ್ಸು-ಹೃದಯಗಳನ್ನು ಕಲ್ಲುಮಾಡಿ ಕೊಂಡು ನಾನೇ ಕೈಯಾರ ಅವರಿಗೆ ವಿಷವನ್ನು ಹಂಚಿದೆ.... ಅವರದನ್ನು ಎಷ್ಟು ಆನಂದದಿಂದ ಸ್ವೀಕರಿಸಿದರು ತಿಳಿಯು ವುದೆ? ತಮ್ಮ ಬಂಧವಿಮೋಚಕ ಮಿತ್ರನೆಂದು ಉತ್ಸಾಹ ದಿಂದ ಮೃತ್ಯುವಶರಾದರು....ಆಗಿನ ದೃಶ್ಯವನ್ನು ಕಂಡ ಎಂತಹ ಕಲ್ಲೆದೆಯೂ ಒಡೆದು ಚೂರಾಗುತ್ತಿತ್ತು....ಅವರೆ ಲ್ಲರ ಆ ದುರ್ದೆಶೆಗೆ ಕಾರಣರಾದವರನ್ನು ನಿರ್ಮೂಲಮಾಡು ವುದಾಗಿ ಆಗ ಶಪಥಮಾಡಿದೆ....ಸತ್ಯ....ಆದರದು ಬಹಳ ಹಿಂದಿನ ಮಾತು....ಅದೆಲ್ಲವನ್ನೂ ಮರೆತೆ....ಎಷ್ಟೇ ಆದರೂ ನಾನೂ ಹೆಂಗಸು....ನನ್ನಿಂದೇನು ಸಾಧ್ಯವಾದೀತು?

**ವೃದ್ಧ**—ನಿನ್ನ ಮನಸ್ಸಿನಲ್ಲಿರುವುದೆಲ್ಲವನ್ನೂ ಹೇಳಿದರೆ ನಿನಗೆ ಶುಭ ವಾದೀತು....

**ಜುಲೇಖಾ**—(ಅಸಮಾಧಾನದಿಂದ)....ನನಗ್ಯಾವ ಶುಭವೂ ಆಗಬೇಕಾ ದುದಿಲ್ಲ....ನೀವು ನಾಳೆ ಸಮ್ರಾಜ್ಞಿಯೆದುರಿನಲ್ಲಿ ನಿಂತಾಗ ನಿಮಗೆ ಶುಭವಾಗಲಾರದು....ನನ್ನನ್ನಿಲ್ಲಿಂದ ಹೋಗಗೊಡಿ ....ಇಲ್ಲವಾದರೆ (ಎಂದು ಉಡಿಯಲ್ಲಡಗಿದ್ದ ಗುಪ್ತ ಕಠಾರಿಗೆ ಕೈಹಾಕುವಳು)

**ವೃದ್ಧ**—(ಕೈತಟ್ಟಿ)....ಹೋಗಬಹುದು....ನಿನ್ನನ್ನಾರೂ ತಡೆಯರು.... ಆದರೆ ಹೋಗುವ ಮುಂಚೆ ಯೋಚಿಸಿ ನೋಡು....ನಾನು ಹೇಳಿದುದು....

**ಜುಲೇಖಾ**—ನಿಮಗೆ ಹುಚ್ಚು ಹಿಡಿದಿದೆ....

[ ಎಂದು ದ್ವಾರವನ್ನು ದಾಟುತ್ತಿರುವ ವೇಳೆಗೆ ಅವಳು ಕೃಪಾಣವನ್ನಾಚೆಗೆಳೆಯಲವಕಾಶಕೊಡದೆ ತಟ್ಟನೆ ಇಬ್ಬರು ಸೇವಕರು ಅವಳನ್ನು ಹಿಡಿದು ಬಂಧಿಸಿ ಒಳಕ್ಕೆಳೆತಂದು ನೆಲದಮೇಲೆ ಕುಕ್ಕುವರು. ವೃದ್ಧನು ಗದಗಹಿಸಿ ನಗುತ್ತಿರುವಾಗ ಹೊರಗಿನಿಂದ ವಿಕಟನಗೆಯೊಂದು ಕೇಳಿಬರುವುದು. ಹಿಂದೆಯೇ ಹುಚ್ಚು ಮುಲ್ಲಾನಿಯ ಗೀತಗಾನವು ಕೇಳಿಬರುವುದು. ಅದನ್ನು ಕೇಳಿದ ಜುಲೇಖೆಯ ಮೊಗದಲ್ಲಿ ಹೊಸ ಹುರುಪು ಮೈದೋರುವುದು. ವೃದ್ಧನು ಸೇವಕರಿಗೆ ಸಂಜ್ಞೆ ಮಾಡಲು, ಅವರು ಕುಣಿಕೆ ಹಾಕಿದ ತುಂಡು ಹಗ್ಗವೊಂದನ್ನು ಜುಲೇಖೆಯ ಹಣೆಗೆ ಸುತ್ತಿ ಮರದ ಪಟ್ಟಿಯೊಂದರಿಂದ ಹಗ್ಗವನ್ನು ತಿರುಗಿಸಿ ಬಿಗಿಮಾಡುತ್ತ ಹೋಗುವರು. ]

**ವೃದ್ಧ**—ಜುಲೇಖಾ!.... ನಿನಗೀರೀತಿ ಹಿಂಸೆ ಕೊಡಲು ಮನಸ್ಸು ಬಾರದು.... ನಿನ್ನ ಒಳಸಂಚಿಗೆ ಯಾರ್ಯಾರು ಸಹಾಯಕರೆಂಬುವನ್ನು ಹೇಳಿಬಿಡು.... ನಿನ್ನನ್ನು....

**ಜುಲೇಖಾ**—ಬಾದಷಹಾ.... ನಾನು ಗುರ್ತಿಸಲಾಗದಷ್ಟು ನೀನು ವೇಷವನ್ನು ಮರೆಮಾಚಲಾರೆ ....ಮತ್ತೆಮತ್ತೆ ಹೇಳುವೆನು, ನಾನ್ಯಾವ ಒಳಸಂಚನ್ನೂ ಅರಿಯೆ....(ವೃದ್ಧನು ವಿಸ್ಮಿತನಾಗಿ ಫಕೀರನ ಮೇಲು ಹೊದಿಕೆಯನ್ನು ಕಿತ್ತೊಗೆದು ಜಹಾಂಗೀರನಾಗುವನು) ಹುಲಿಯಪ್ಪನೆಂದರೂ ಹುಲಿರಾಯನೆಂದರೂ ಹುಲಿಯು ಮೇಲೆ ಬೀಳುವುದೇನೂ ತಪ್ಪದು.... ಹೊಟ್ಟೆಯಲ್ಲಿರುವುದನ್ನು ಹೊರಗೆಡವದೆ ಹಿಂಸೆಗೆ ಹೆದರಿ ಕೂಡಬೇಕೇಕೇ? ಮೃತ್ಯುವಿನೊಂದಿಗೆ ಸರಸವಾಡುವುದನ್ನೂ ಹಿಂದೂಗಳು ಕಲಿತಿರುವರೆಂಬುದನ್ನು ಇದುವರೆಗೆ ನೀನುಅರಿತಿರಲಿಲ್ಲ....ಇಂದು ತಿಳಿಯುವೆ..... ....ನಾನು ಹೇಳುವುದಕ್ಕೆ ಕಿವಿಗೊಡು........ ಮಹಿಷದ ಮೇಲೆ ಮಳೆಗರೆದಂತಾಗದಿರಲಿ....ಬಾದಷಹಾ! ....ಧರ್ಮದ ಅಡಿಗಲ್ಲಮೇಲೆ ನಿಂತು ಧರ್ಮವಿರುದ್ಧವೂ ನೀತಿಬಾಹಿರವೂ ಆದ ಕಾರ್ಯಗಳನ್ನು ನೀವು ಮಾಡುತ

ಸತ್ಯದ ಸೋಗು ಹಾಕುತ್ತಿರುವ ಧರ್ಮಾಭಿಮಾನಿಗಳು ನೀವು. ನಿಮ್ಮಿಂದ ಧರ್ಮಕ್ಕೆ ವಿರೋಧವಾಗಿ ಗೋಹತ್ಯೆ ಯೇ ಮೊದಲಾದ ಅನೇಕಾನೇಕ ಕಾರ್ಯಗಳು ಪ್ರತಿಕ್ಷಣದಲ್ಲೂ ಜರಗುತ್ತಿವೆ....ಗೋವು ಹಿಂದೂಗಳಿಗೆ ಪೂಜ್ಯ—ನಿಮಗೆ ವಧ್ಯ....ನಿಮ್ಮ ದೃಷ್ಟಿಯಲ್ಲಿ ಸ್ತ್ರೀಯ ಸತೀತ್ವವು ಕಸಕ್ಕಿಂತ ಕಡೆ....ಹಿಂದೂಗಳಿಗದು ಸರ್ವಸ್ವ....ಕೋಟ್ಯಾಂತರ ಹಿಂದು ಗಳ ಹೊಟ್ಟೆಗೆ ಸಾಕಷ್ಟಿಲ್ಲದಂತೆ ನೀವು ಮಾಡಿರುವಿರಿ.... ಮಿತಿಮೀರಿದ ತೆರಿಗೆಯ ಸುಲಿಗೆಯಿಂದಲೂ, ನಿಮ್ಮವರ ಕಿರುಕುಳಗಳಿಂದಲೂ ಅವರು ನಿರ್ಭಾಗ್ಯರೂ-ನಿರಾಶ್ರಿತರೂ ಆಗಿ ಹುಳುಗಳಂತೆ ಮಿಲಮಿಲನೆ ಒದ್ದಾಡುತ್ತಿರುವರು— ಅವರನ್ನು ಹೀಗೆ ಸಂಕಟಸಾಗರದಲ್ಲಿ ಕಲ್ಲುಕಟ್ಟಿ ಮುಳುಗಿಸಿ, ನೀವು ನಿಶ್ಚಿಂತರಾಗಿ ಲೇಶಮಾತ್ರವೂ ಲೋಪವಿಲ್ಲದಂತೆ ರಾಜಭೋಗವನ್ನನುಭವಿಸುತ್ತಿರುವಿರಿ....ನಿಮ್ಮ ಧರ್ಮವು ಇದನ್ನೇ ಬೋಧಿಸುವುದೆ? ದೇವರು ನಿಮ್ಮಂತೆಯೇ ಅವರನ್ನೂ ಸೃಷ್ಟಿಸಿಲ್ಲವೆ? ಅವರೇಕೆ ಹೀಗೆ ನರಕದಲ್ಲಿ ಬಿದ್ದು ನರಳಬೇಕು?

**ಜಹಾಂಗೀರ್**—(ಹುಬ್ಬುಗಂಟಿಕ್ಕಿ, ದುರದುರನೆ ನೋಡುತ್ತ) ....ಮುಗಿ ಯಿತೆ ನಿನ್ನ ಪನ್ಯಾಸ?

**ಜುಲೇಖಾ**—ಬಂದುದನ್ನನುಭವಿಸಲೇ ಬೇಕಾಗಿರುವಾಗ ಮನಸ್ಸಿನಲ್ಲಿ ರುವುದನ್ನೇಕೆ ಒಡೆದು ಹೇಳಬಾರದು....ಇನ್ನೆರಡು ಮಾತಿವೆ ....ಬಾದಷಹಾ! ನಿಮ್ಮ ಸುತ್ತಮುತ್ತಲಿದ್ದವರು ಇದುವರೆಗೆ ನಿಮಗೆ ಹೇಳದ ಮಾತುಗಳನ್ನು ನಾನಿಂದು ಹೇಳುತ್ತಿದ್ದೇನೆ- ಕೇಳು....ನಿಮ್ಮ ಆಡಳಿತ ನೀತಿಯಲ್ಲಿ ಕಟುಕರಿಗಿಂತಲೂ, ಡಕಾಯಿತರಿಗಿಂತಲೂ ನೂರ್ಮಡಿಯಾದ ಧರ್ಮದ್ರೋಹವೂ —ಅನ್ಯಾಯವೂ ತುಂಬಿದೆ....ಹಿಂದೂಗಳ ಬೆಂಬಲದಿಂದ

ನಿಮ್ಮ ಸಿಂಹಾಸನವು ನಿಂತಿದೆ....ಅದಕ್ಕೆ ಪ್ರತಿಫಲವಾಗಿ ಹಿಂದೂಗಳು ಉಸಿರಾಡಲೂ ಸಾಧ್ಯವಿಲ್ಲದಂತೆ ಅವರ ದಾಸ್ಯ ಶೃಂಖಲೆಗಳನ್ನು ನೀವು ಬಿಗಿಮಾಡುತ್ತಿರುವಿರಿ........ಇದು ಎಂದಿನವರೆಗೆ?....ಜನರಲ್ಲೀಗಾಗಲೇ ಜಾಗೃತಿಯುಂಟಾಗಿದೆ ....ಸ್ವಾತಂತ್ರ್ಯದ ಬೆಲೆಯೇನೆಂಬುದನ್ನು ಅವರು ಮನ ಗಾಣುತ್ತಿದ್ದಾರೆ....ಅಲ್ಲಲ್ಲಿ ಏಳುತ್ತಿರುವ ದಂಗೆಗಳೇ ಅದಕ್ಕೆ ನಿದರ್ಶನವಾಗಿದೆ....ನಿಮ್ಮ ಕ್ರೌರ್ಯಕ್ಕೆ ಮಿತಿಯಿಲ್ಲ-ಹಿಂದೂ ಗಳ ಸಹನೆಗೆ ಮಿತಿಯುಂಟು. ಆ ಮಿತಿಯ ಪರೀಕ್ಷೆಗೆ ನೀವು ಹೊರಟಿರುವಿರಿ....ಅದರ ಪರಿಣಾಮವು ಬಹಳ ಭಯಂಕರ ವಾಗುವುದು.

**ಜಹಾಂಗೀರ್**— (ಕೋಪದಿಂದ ಹಲ್ಲುಕಡಿಯುತ್ತ) ....ಸಾಕು ನಿಲ್ಲಿಸು. ........ನಿನ್ನ ಮಾವಂದಿರೂ ನಿನ್ನ ಮಗಳೂ ಎಲ್ಲಿರುವರು ಹೇಳು ? (ಸೇವಕರ ಮುಖ ನೋಡುವನು. ಅವರು ಹಗ್ಗವನ್ನು ಬಿಗಿಮಾಡುವರು)

**ಜುಲೇಖಾ**—ನಾನು ಮತಭ್ರಷ್ಟಳಾದಂದು ಅವರು ಆ ಅಪಮಾನ ದಿಂದ ನನ್ನ ಮಗಳೊಡನೆ ನದಿಯಲ್ಲಿ ಹಾರಿಕೊಂಡರೆಂದು ಕೇಳಿದೆ.

**ಜಹಾಂಗೀರ್**—ಅದನ್ನು ನೀನೂ ಹೃದಯಾರ ನಂಬುವೆಯಾ ?

**ಜುಲೇಖಾ**—ನಂಬದೇನು ಮಾಡಲಿ ?

**ಜಹಾಂಗೀರ್**—ಫಾತೇಪುರ್ ಸಿಕ್ರಿಯ ಗುಟ್ಟೇನು ?

**ಜುಲೇಖಾ**—ನಾನರಿಯೆ. (ಹಗ್ಗವು ಮತ್ತಷ್ಟು ಬಿಗಿಯಾಗುವುದು)

**ಜಹಾಂಗೀರ್**—ಹುಚ್ಚಿ ದುಲಾರಿಯ ಮೇಲೆ ನಿನ್ನ ಮಮತೆ ಬಹಳ ವೆಂದು ಕೇಳಿದ್ದೆ....ಅವಳನ್ನೂ ಚಿತ್ರಹಂಸೆಗೊಳಪಡಿಸಿದರೆ ಆಗ ನೀನು ಹೇಳಲು ಸಮ್ಮತಿಸಬಹುದು....ನೀನು ಹೇಳ

ದಿದ್ದರೆ ಅವಳ ಬೆನ್ನ ಚರ್ಮವು ಸುಲಿದು ಬರುವವರೆಗೂ ಕೋರಡೆಯಿಂದ ಹೊಡೆಸುವೆನು....ಇನ್ನಾದರೂ ತಿಳಿಯದೇ ....ಜುಲೇಖಾ ?

**ಜುಲೇಖಾ**—ಇಲ್ಲ....(ಬಿಗಿಯಾಗುತ್ತ ಹೋಗುವುದು)

**ಜಹಾಂಗೀರ್**—ದೆಹಲಿಯ ದ್ವಾರದಬಳಿಯಾಗಿದ್ದ—ವಿಚಿತ್ರ ಕೊಲೆಗಳ ಸುದ್ದಿಯನ್ನೂ ಅರಿಯೆಯಾ ?

**ಜುಲೇಖಾ**—(ಬಾಧೆಯನ್ನು ನುಂಗುತ್ತ)....ನಾನರಿಯೆ....

**ಜಹಾಂಗೀರ್**—ಹಾಗಾದರೆ ಷಹಜಾದಾ ಖುರುಮನು ಔತುಕೊಂಡಿರುವ ಜಾಗವೂ ನಿನಗೆ ತಿಳಿಯದು ?....ಹೇಳು ಜುಲೇಖಾ....

**ಜುಲೇಖಾ**—(ಸ್ವಲ್ಪ ತಡೆದು) ....ನಾನಿನ್ನು....ಏನೂ ಹೇಳಲಾರೆ....

**ಜಹಾಂಗೀರ್**—ನಾನು ಹೇಳಿಸುವೆನು. (ಕೈತಟ್ಟುವನು. ಸೈನಿಕರಿಬ್ಬರೂ ದುಲಾರಿಯನ್ನು ಎಳೆತಂದು ಮುಂದೆ ನೆಲದ ಮೇಲೆ ದೂಡುವರು. ಬಾದಷಹನ ಸಂಜ್ಞೆ ಕಂಡೊಬ್ಬ ಸೇವಕನು ಮುಳ್ಳಿನ ಕೋರಡೆಯಿಂದ ದುಲಾರಿಯ ಬೆನ್ನಿನಮೇಲೆ ಹೊಡೆಯಲಾರಂಭಿಸುವನು ದುಲಾರಿ ಅಳುಮಿಶ್ರವಾದ ನಗುವನ್ನು ನಗುವಳು.)

**ಜಹಾಂಗೀರ್**—ದುಲಾರಿಯ ಬೆನ್ನಮೇಲಿಳಿಯುವ ಮುಳ್ಳುಕೋರಡೆಯಾದರೂ ನಿನ್ನ ಮನಸ್ಸನ್ನು ಬದಲಿಸುವುದು ಜುಲೇಖಾ! (ಜುಲೇಖೆಯು ಅವುಡುಗಚ್ಚಿ ನೋಡುತ್ತಿರಲು, ಕಣ್ಣುಗಳಿಂದ ನೀರು ಹರಿಯುವುದು........)

**ಜಹಾಂಗೀರ್**—ಚೌಕ್ ಬಾಜಾರಿನ ಪಾನ್‌ವಾಲಾ, ತರಕಾರಿಯವನು ....ಹುಚ್ಚು ಮುದುಕಿ,....ಸನ್ಯಾಸಿ....ಮೌಲ್ವಿ ಇವರ್‍ಯಾರನ್ನೂ ನೀನರಿಯೆಯಾ....ಜುಲೇಖಾ ?....ನೋಡು........ ಇನ್ನು ಸ್ವಲ್ಪ ಕಾಲದಲ್ಲಿ ದುಲಾರಿಯ ಬೆನ್ನ ಚರ್ಮವು

ಸುಲಿದು ಹೋಗುವುದು....ಇಷ್ಟಾದರೂ ನೀನು ಏನನ್ನೂ ಅರಿಯೆ....ಅಲ್ಲವೇ ?....

**ಜುಲೇಖಾ**—(ತನ್ನ ಬಾಧೆಯನ್ನು ತಾಳಲಾರದೆಯೂ, ದುಲಾರಿಯ ಸಂಕಟ ವನ್ನು ನೋಡಲಾರದೆಯೂ, ಘಟ್ಟಿಯಾಗಿ....ಮತ್ತೆ ಮತ್ತೆಯೂ ಹೇಳುವೆನು....ನಾನೇನನ್ನೂ ಕಂಡವಳಲ್ಲ........ದುಲಾರಿಯ ನ್ನೇಕೆ ಹಿಂಸಿಸುವೆ....ಬಾದಷಹಾ ?....ಹಿಂಸಿಸುವ ಆಸೆ ಯಿದ್ದರೆ ನನ್ನನ್ನು ಚಿತ್ರಹಿಂಸೆಗೊಳಪಡಿಸು....ಆ ನಿರಪರಾಧಿ ನಿರ್ಭಾಗ್ಯೆಯನ್ನೇಕೆ ಗೋಳುಗುಟ್ಟಿಸುವೆ?....(ಎಂದು ಕೂಗಿ ಮೂರ್ಛಿತಳಾಗುವಳು....ದುಲಾರಿಯೂ ಸೊರಗಿ ಬೀಳುವಳು)

[ಬಾದಷಹ ಜಹಾಂಗೀರನು ಇದರಿಂದ ಅಸಮಾಧಾನಗೊಂಡು ಸೇವಕ ರಿಗೆ ಅವಳನ್ನುಪಚರಿಸಿ ಎಚ್ಚರಿಸಲು ಕೈಸನ್ನೆಯಿಂದ ಸೂಚಿಸುವನು. ಸೇವಕ ರಲ್ಲೊಬ್ಬನು ಪಾತ್ರೆಯೊಂದರಲ್ಲಿ ನೀರು ತಂದು ಜುಲೇಖೆಯ ತಲೆಗೆ ನೀರು ತಟ್ಟಿ, ಗಾಳಿ ಹಾಕಿ ಉಪಚರಿಸುವನು. ಕೆಲಕಾಲ ಕಳೆದರೂ ಜುಲೇಖೆಯು ಚೇತರಿಸಿಕೊಳ್ಳದಿರುವುದನ್ನು ಕಂಡು ಬಾದಷಹನು ಅಸಹನೆಯಿಂದ]

**ಜಹಾಂಗೀರ್**—(ತನ್ನಲ್ಲೆ) ಛೆ ! ಹಿಂದೂಗಳದೆಂತಹ ಕಲ್ಲುಗುಂಡಿಗೆ? ಹಿಂಸೆಗೊಟ್ಟರೂ ಇವಳು ಬಾಯ್ಬಿಡುವಂತಿಲ್ಲ....ಇರಲಿ.... ಇನ್ನು ಉಪಾಯದಿಂದ ಇವಳ ಚಲನವಲನಗಳ ಮೇಲೆ ಕಣ್ಣಿಟ್ಟಿದ್ದರೆ ಆಗಲಾದರೂ ಇವಳ ಗುಟ್ಟು ಬಯ ಲಾಗದಿರುವುದೆ....? (ಸೇವಕನನ್ನು ಕುರಿತು) ....ಹೊರಡಿ.... ಜುಲೇಖೆಯ ದಾಸಿಯು ಬಂದು ಇವಳನ್ನುಪಚರಿಸಿಕೊಳ್ಳು ವಂತೆ ತಿಳುಹಿಸಿ....(ಎಂದು ಯೋಚನಾಮಗ್ನನಾಗಿ ತೆರಳು ವನು. ಸೇವಕರೂ ಹಿಂಬಾಲಿಸಿ ಹೋಗುವರು. ಜುಲೇಖೆಯು ಮೆಲ್ಲನೆ ಕಣ್ತೆರೆದು ಯಾರೂ ಇಲ್ಲವೆಂಬುದನ್ನು ದೃಢಪಡಿಸಿಕೊಂಡು ಮೆಲ್ಲನೆ ಎದ್ದು ಕೂಡುವಳು. ಕಟ್ಟುಗಳನ್ನು ಬಿಚ್ಚಿಕೊಳ್ಳಲು ಶ್ರಮಿಸುತ್ತಿರುವಂತೆ ಅವಳ ದಾಸಿ ದಯಾಮಣಿಯು ಓಡಿಬಂದು

ಒಡತಿಯ ಸ್ಥಿತಿಯನ್ನು ಕಂಡು ಭಯದಿಂದ ನಡುಗುತ್ತ....ಕಣ್ಣೀರುಕ್ಕಲು ಕಟ್ಟುಗಳನ್ನು ಬಿಚ್ಚಲು ತೊಡಗಿ.......)

**ದಯಾಮಣಿ**—ಮಾಯಿ!?........ಚಂಡಾಲರು ನಿಮ್ಮನ್ನೆಷ್ಟು ಹಿಂಸಿಸಿದರೊ....ಮಾಯಿ!....ಯಾರು ದ್ರೋಹವೆಣಿಸಿದರು?.... ಎಲ್ಲವೂ ಬಯಲಾಯಿತೆ ?....

**ಜುಲೇಖಾ**—ದೇವರ ದಯದಿಂದ ಇನ್ನೂ ಅಷ್ಟು ಅವರಿಗೆ ತಿಳಿದಂತಿಲ್ಲ....ದಯಾಮಣಿ!....ಹಿಂದಿನಿಂದ ನಿನಗೆಲ್ಲ ಹೇಳುವೆನು....ಈಗ ನಿನ್ನ ಸುದ್ದಿಯೇನು ಮೊದಲು ತಿಳುಹು.... (ಎಂದು ತನ್ನ ಕಟ್ಟುಗಳನ್ನು ಪೂರ್ಣವಾಗಿ ಬಿಡಿಸಿಕೊಂಡು, ದುಲಾರಿಯನ್ನು ಉಪಚರಿಸಲಾರಂಭಿಸುವಳು. ಅವಳ ಬೆನ್ನ ಮೇಲಿನ ಬಾಸುಂಡೆಗಳನ್ನು ನೋಡಿ ಕಣ್ಣೀರು ಚಿಮ್ಮುವುದು.... ಅವುಡುಗಚ್ಚುವಳು.)

**ದಯಾಮಣಿ**—ಮಾಯಿ!.......ಬಾದಷಹನು, ತನ್ನ ಮುದ್ರೆಯದಾಗಲೀ, ನೂರ್ ಜಹಾನಳ ಮುದ್ರೆಯದಾಗಲೀ ರಹದಾರಿಯಿದ್ದಲ್ಲದೆ ಯಾರನ್ನೂ ಹೊರಕ್ಕೆ ಹೋಗಗೊಡದೆ........ಹಾಗೆ ಹೋಗಲೆತ್ನಿಸುವವರನ್ನು ಬಂಧಿಸಿ ತನ್ನಲ್ಲಿಗೊಯ್ಯಬೇಕೆಂದು ಎಲ್ಲ ದ್ವಾರಗಳ ಪಾಲಕರಿಗೂ ಕಟ್ಟಾಜ್ಞೆ ವಿಧಿಸಿರುವನು. ಎಲ್ಲ ಸುರಂಗ ಮಾರ್ಗಗಳಲ್ಲೂ ಕಾವಲಿರಿಸಿದ್ದಾನೆ....ಅಲ್ಲದೆ ನೀವು ಹೊರಕ್ಕೆ ಹೋಗಲೆಳಸಿದರಂತೂ ಕೂಡಲೇ ನಿಮ್ಮನ್ನು ಹಿಡಿತರಬೇಕೆಂದು ಆಜ್ಞಾಪಿಸಿದ್ದಾನೆ....ಮಾಯಿ....ಮುಂದೇನು ಗತಿ ?....

**ಜುಲೇಖಾ**—(ತನ್ನ ಕೈಬೆರಳಿನಲ್ಲಿದ್ದ ನೂರ್‌ಜಹಾನಳ ಮುದ್ರೆಯುಂಗುರವನ್ನ ನೋಡುತ್ತ ಯೋಚನಾ ಮಗ್ನಳಾಗಿದ್ದವಳು)........... ಅಂಜದಿರು ದಯಾಮಣಿ!........ಈಗುಳಿದ ಕಾರ್ಯಕ್ರಮವು ಪೂರ್ಣವಾಗಬೇಕಾದರೆ, ಎಲ್ಲರೂ ಎದೆಗೆಡದೆ ಧೈರ್ಯ

ದಿಂದ ವರ್ತಿಸಬೇಕು....ಸ್ವಲ್ಪ ಅಂಜಿಕೆಯು ಮುಖದಲ್ಲಿ ತೋರಿಬಂದರೂ ಸರ್ವನಾಶವಾದೀತು....

**ದಯಾಮಣಿ**—ಮಾಯಿ!....ಈಗಾಗಲೇ ಸೂರ್ಯೋದಯವಾಗುತ್ತ ಬಂದಿತು....ಸಮ್ರಾಜ್ಞಿಯು ಮಜ್ಜನಾದಿಗಳನ್ನು ಮುಗಿಸಿ ಕೊಳ್ಳುತ್ತಲೇ ಅವಳನ್ನು ಶೀಷ್ ಮಹಲಿನಲ್ಲಿ ನೀನು ಕಾಣ ಬೇಕೆಂದು ನಿನ್ನಿನ ರಾತ್ರಿಯೇ ಆಜ್ಞೆಯಾಗಿತ್ತು....ಬೇಗ ಇಲ್ಲಿಂದ ಹೊರಡುವುದುತ್ತಮವಲ್ಲವೇ....? ನೀವು ಈಗಲೂ ಪ್ರಯತ್ನಿಸಿದರೆ ನಾವು ಮೂವರೂ ಇಲ್ಲಿಂದ ಪಾರಾಗಿ ಹೋಗಲು ಸ್ವಲ್ಪ ಅವಕಾಶವಿದೆ....

**ಜುಲೇಖಾ**—ಹೌದು....ಅವಕಾಶವಿದೆ ದಯಾಮಣಿ! ಆದರೆ ನನಗಿಲ್ಲ ........ನಿಮ್ಮಿಬ್ಬರಿಗೂ ಉಂಟು....ಬಾದಷಹನು ನನ್ನಲ್ಲೂ ನೂರ್‌ಜಹಾನಳ ಮುದ್ರೆಯುಂಗುರವಿರುವುದೆಂಬುದನ್ನು ಮನಗಾಣುವ ಮುಂಚೆಯೇ ನಿಮ್ಮಿಬ್ಬರಿಗೂ ರಹದಾರಿ ಬರೆದುಕೊಟ್ಟು ಮುದ್ರೆಯುಂಗುರದ ಉಪಯೋಗ ಮಾಡಿ ಕೊಳ್ಳುತ್ತೇನೆ........ಕಾಲಕಳೆದರೆ ಘಾತವಾದೀತು........ ದಯಾಮಣಿ !....(ದುಲಾರಿಯು ಮೆಲ್ಲನೆ ಚೇತರಿಸಿಕೊಳ್ಳು ತ್ತಿರುವಳು)

**ದಯಾಮಣಿ**—....ಮಾಯಿ !....ನಿಮ್ಮನ್ನು ಏಕಾಂಗಿಯಾಗಿ ಸಂಕಟ ದಲ್ಲಿ ಬಿಟ್ಟು ನಾವು........

**ಜುಲೇಖಾ**—ದಯಾಮಣಿ ! ನಾನು ಮೃತ್ಯುವಿನೊಂದಿಗೆ ಆಟವಾಡು ತ್ತಿದ್ದೇನೆ....ಇದುವರೆವಿಗೂ ನನ್ನ ಕೈಮೇಲಾಗಿತ್ತು........ ಈಗ ಮೃತ್ಯುವಿನ ಸರದಿ....ನಾನೊಂದು ಪತ್ರವನ್ನು ರಾಣಾ ಕರ್ಣಸಿಂಹರಿಗೆ ಬರೆದುಕೊಡುತ್ತೇನೆ....ಅದರಲ್ಲಿ ಹೇಳಿರುವು ದಕ್ಕೆ ಚಾಚೂ ತಪ್ಪದಂತೆ ನಡೆದುಕೊಳ್ಳಬೇಕೆಂಬುದು

ನನ್ನಾಜ್ಞೆಯೆಂದು ತಿಳುಹು....ನಾನು ನಾಳೆ ಸಂಜೆಯೊಳಗೆ ಫಾತೇಪುರ್ ಸಿಕ್ರಿಯಲ್ಲಿ ನಿಮ್ಮನ್ನು ಕೂಡಿಕೊಳ್ಳುವೆನು.... ನಾನು ಬರದಿದ್ದರೆ ನನ್ನಾಸೆಯನ್ನೆಲ್ಲರೂ ತೊರೆದು....ಫಾತೇಪುರ್ ಸಿಕ್ರಿಯಲ್ಲಿ ಏನನ್ನೂ ಹಿಂದೆ ಬಿಡದೆ ಎಲ್ಲವನ್ನೂ ಸಾಗಿಸಿಕೊಂಡು ಎಲ್ಲರೂ ಮೇವಾರಕ್ಕೆ ಹೊರಟು ಬಿಡಬೇಕು....ತಿಳಿಯಿತೆ ? (ದಯಾಮಣಿಯು ತಲೆಬಾಗುವಳು. ದುಲಾರಿಯು ಪೂರ್ಣವಾಗೆಚ್ಚರಗೊಳ್ಳಲು ಅವಳನ್ನು ಎದೆಗಪ್ಪಿಕೊಂಡು)....ದಯಾಮಣಿ !.... ...ನಾನು ಹೊರಟುಬರಲು ಮೃತ್ಯುವೊಂದೇ ಅಡ್ಡವಾದೀತು....ಹಾಗಾದರೆ ದುಲಾರಿಯನ್ನು, ನನ್ನ ಈ ಲಲಿತೆಯನ್ನು ಸಂತೈಸುವುದು ನಿನ್ನ ಭಾರ........

**ದುಲಾರಿ** —(ಬೆನ್ನು ಮುಟ್ಟಿ ನೋಡಿಕೊಳ್ಳುತ್ತಿದ್ದವಳು, ತಾಯಿಯ ಮಾತನ್ನು ಕೇಳಿ ತಟ್ಟನೆ ಕಂಗೆಟ್ಟು) " ಅಮ್ಮಾ.............. " (ಎಂದು ತಾಯನ್ನು ತಬ್ಬಿಕೊಂಡಳುವಳು........)

**ಜುಲೇಖಾ**—ದಯಾಮಣಿ!....ನೀನು ಸ್ವಲ್ಪ ಬಾಗಿಲು ಕಾಯುತ್ತಿರು, ನಾನು ದುಲಾರಿಗೆರಡುಮಾತು ಹೇಳಿ ಬರುತ್ತೇನೆ........... (ದಯಾಮಣಿ ಹೊರಡುವಳು) ....ಮಗೂ.....ಲಲಿತಾ.......

**ದುಲಾರಿ**—(ಕಂಬನಿಗರೆಯುತ್ತ, ಮೊಗವನ್ನೆತ್ತಿ)..........ಅಮ್ಮಾ........ ನನ್ನನ್ನೂ ಬಳಿಯಲ್ಲಿರಗೊಡು........ಇಬ್ಬರೂ ಒಂದಿಗೇ ಸಾವನ್ನಪ್ಪುವ....

**ಜುಲೇಖಾ**—(ಮನಸ್ಸು ಬಿಗಿಹಿಡಿಯುತ್ತ)........ಮಗೂ....ಈಗ ಸಾವನ್ನಪ್ಪುವ ಚಿಂತೆಯೇಕೆ....ಇನ್ನೂ ವೇಳೆ ಬಹಳವಿದೆಯಲ್ಲವೇ ....ಅಷ್ಟರಲ್ಲಿ ಏನೇನು ಸಾಧ್ಯವಾಗುವುದೋ ಯಾರು ಬಲ್ಲರು ?

**ದುಲಾರಿ**—....ಇಲ್ಲವಮ್ಮಾ ನನಗೇಕೋ ಈಗ ಭಯವಾಗುತ್ತಿದೆ.... ನಾನು ನಿನ್ನಿಂದ ಅಗಲಿ ಹೋಗಲಾರೆ....ಈಗೆಲ್ಲವೂ ಕೈಮೀರಿ ಹೋಗಿದೆ....ರಹಸ್ಯವಾಗಿ 'ಪಾನ್‌ವಾಲ'ನನ್ನು ಬಂಧಿಸಿ ಅವನನ್ನು ಚಿತ್ರಹಿಂಸೆಗೀಡುಮಾಡಿ ಅವನಿಂದ ಆದಷ್ಟೂ ನೂರ್‌ಜಹಾನಳ ಕಡೆಯವರು ತಿಳಿದಿರುವಂತೆ ತೋರು ವುದು........ನಾನಲ್ಲಿಗೆ ಅಕಸ್ಮಾತ್ತಾಗಿ ಹೋದೆ. ಅವರು ಅರ್ಧರ್ಧವಾಗಿ ಕೇಳುತ್ತಿದ್ದಂತೆಯೇ........ಅಮ್ಮಾ........

(ದುಃಖವುಕ್ಕಿ ಬರುವುದು. ಸುಮ್ಮನಾಗುವಳು.)

**ಜುಲೇಖಾ**—ಏನಾಯ್ತು ಮಗೂ....?

**ದುಲಾರಿ**—ಪಾನ್‌ವಾಲನನ್ನು ಕಠಾರಿಯೆಸೆದು........ನಾನು........

(ತಾಯಮಡಿಲಲ್ಲಿ ಮುಖಮುಚ್ಚಿಕೊಂಡು ರೋದಿಸುವಳು.)

**ಜುಲೇಖಾ**—(ಮುಖವು ಬಿಳುಪಿಡಲು)....ಲಲಿತಾ....ನಮ್ಮ ಕಾರ್ಯ ಸಾಧನೆಗೆ ನೀನೂ ರಕ್ತಹಸ್ತಳಾಗಬೇಕಾಯ್ತೆ?....ಹೂ.... ಸಮಯ ಬಂದಲ್ಲಿ ಹಾಲಿಟ್ಟ ಕೈಯೇ ವಿಷವೂಡಿಸಬಲ್ಲುದು ....ಏಳು ಲಲಿತ....ನೀವು ಜಾಗ್ರತೆಯಾಗಿ ಇಲ್ಲಿಂದ ದೂರ ವಾಗಬೇಕು....

**ದುಲಾರಿ**—ಇಲ್ಲವಮ್ಮಾ............ಹೋಗಬೇಕಾದರೆ ನಿನ್ನೊಂದಿಗೇ ಹೋದೇನು....ನೀನಿಲ್ಲದೆ....

**ಜುಲೇಖಾ**—ಲಲಿತಾ......ಹೀಗೇಕೆ ಹಠಹಿಡಿಯುವೆ........? ನಾನು ಒಂಟಿಯಾಗಿ ಹೇಗಾದರೂ ತಪ್ಪಿಸಿಕೊಂಡು ಬರಲು ಸುಲಭ ವಾದೀತಲ್ಲದೆ ...ಸಂಗಡ ಇನ್ನೊಬ್ಬರು ಬಂದರೆ ಸಾಧ್ಯವೆ?

**ದುಲಾರಿ**—(ನಿರಾಶಳಾಗಿ) ....ಅಮ್ಮಾ........ಇದೇ ಕೊನೆಯ ಭೇಟಿ ಯೆಂದು ನನಗೆನಿಸುತ್ತಿದೆ............ಅಲ್ಲವೆನ್ನಲು ಭರವಸೆ ಯೇನಿದೆ....?

**ಜುಲೇಖಾ**—ಬಹಳವಿದೆ........ಲಲಿತ....ನೀನು ಎದೆಗೆಟ್ಟರೆ ನಾನು ಧೈರ್ಯದಿಂದಿರುವುದು ಹೇಗಾದೀತು....ಈ ಒಂದು ಬಾರಿ ನನಗೆ ಬೆಂಬಲಕೊಡಲಾರೆಯಾ....?....ಕೇಳು ಮಗೂ...... ಇಷ್ಟು ವರ್ಷಗಳ ಕಾಲ ಶ್ರಮಿಸಿದುದಕ್ಕೆ ಈಗ ನಮ್ಮ ಪ್ರಯತ್ನಗಳು ಫಲಿಸುವ ಸಂದರ್ಭವೊದಗಿದೆ....ನಾನು ಹೇಳಿ ರುವುದೆಲ್ಲವನ್ನೂ ಗಮನಿಸಿ ಅದರಂತೆ ಎಚ್ಚರಿಕೆಯಿಂದ ನಡೆದುಕೊಂಡರೆ ಸಮ್ರಾಟ ಸಮ್ರಾಜ್ಞಿಯರಿಬ್ಬರೂ ನಮ್ಮ ಸೆರೆಯಾಳುಗಳಾಗುವರು........ನಮ್ಮಲ್ಲಿ ಸ್ವಾರ್ಥಪರರಾದ ನೂರೆಂಟು ರಾಜರುಗಳಿರುವುದರಿಂದ ಹಿಂದೂ ಸಾಮ್ರಾಜ್ಯ ವನ್ನು ಸ್ಥಾಪಿಸುವುದು ಕಷ್ಟ........ಯಾರು ಸಮ್ರಾಟರಾಗ ಬೇಕೆಂಬುದು ಸಮಸ್ಯೆಯಾಗಿ, ಕೊನೆಗೆ ಅಂತಃಕಲಹಗಳಲ್ಲಿ ಕೊನೆಯಾಗುವುದು....ಆದ್ದರಿಂದ ಇವೆಲ್ಲಕ್ಕೂ ಅವಕಾಶವೇ ಇಲ್ಲದಂತೆ, ಮತ್ತೆ ನಮ್ಮ ಭಾರತದಲ್ಲಿ ಶಾಂತಿ-ಸೌಖ್ಯವು ನೆಲೆಸಲು ಸಾಧ್ಯವಾಗುವಂತೆ ಮಾಡಬೇಕಾದರೆ ಹಿಂದೂ ಮಾತೆಯುದರದಲ್ಲಿ ಜನಿಸಿದ ಷಹಜಾದಾ ಖುರುಮನನ್ನು ಸಮ್ರಾಟನನ್ನಾಗಿ ಮಾಡಬೇಕು....ಅದಕ್ಕನುಕೂಲಿಸಲು ಖುರುಮನಿಗೆ ನಮ್ಮವರನ್ನೇ ಮಿತ್ರರನ್ನಾಗಿ ಮಾಡಿ ಅವನಿಗೆ ಹಿಂದೂಗಳಲ್ಲಿ ಮಮತೆ ಹುಟ್ಟುವಂತೆ ಮಾಡಿದ್ದಾಯಿತು.... ಆದರೆ ನೂರ್‌ಜಹಾನಳು ತನ್ನಳಿಯ ಷಹರಿಯರನಿಗೆ ಸಿಂಹಾಸನ ದೊರಕಿಸಬೇಕೆಂದು ವಿಶ್ವಪ್ರಯತ್ನ ನಡೆಸುತ್ತಿ ರುವಳು....ಈಗ ನಾವು ಸೋತರೆ ಮುಂದೆ ಎಂದೆಂದಿಗೂ ಹಿಂದೂಗಳಿಗೆ ಸೌಖ್ಯವಿರದು. ನನ್ನ ಏರ್ಪಾಡಿನಂತೆ ಬೆಹಾತ್ ನದಿಯ ದಡದಲ್ಲಿ ಸಮ್ರಾಟ—ಸಮ್ರಾಜ್ಞಿಯರು ಸೆರೆಯಾಳುಗಳಾಗುವುದು ಸ್ವತಸ್ಸಿದ್ಧ. ಅನಂತರ ಖುರುಮ ನಿಗೆ ಸಿಂಹಾಸನವೂ, ಹಿಂದೂಗಳಿಗೆ ಸೌಖ್ಯವೂ ಸಿಕ್ಕು

ವುದೂ ಸತ್ಯ....ತಿಳಿಯಿತೆ ಲಲಿತ!....ಈಗ ನಡೆ, ಕಾಲ ವಾಯ್ತು....ನೀವಿಲ್ಲಿರುವ ಪ್ರತಿಘಳಿಗೆಯೂ ನನಗೆ ನರಕ ಯಾತನೆಯಾಗುತ್ತ ಹೋಗುವುದು....ಈಗ ನಾನು ಹೇಳಿ ದುದೆಲ್ಲವನ್ನೂ, ಇತರ ಸಲಹೆಗಳೊಡನೆ ಒಂದು ಪತ್ರದಲ್ಲಿ ಬರೆದು ದಯಾಮಣಿಗೆ ಕೊಡುವೆನು. ಅದನ್ನು ನಿನ್ನ ಪತಿಗೆ ತಲಪಿಸಬೇಕು....ಶತ್ರುಗಳ ಕೈಸೇರುವ ಸಮಯ ಬಂದರೆ ಅದನ್ನು ನಾಶಮಾಡಬೇಕು........ಕರ್ಣಸಿಂಹರಿಗೆ ನಿನ್ನಿಂದ ಆಗ ಇವೆಲ್ಲ ತಿಳಿಯಲಿ....ನಡೆ....ಇಲ್ಲಿಂದ ಹೊರಡುವಿರಂತೆ.

(ಎಂದೆದ್ದು ತಾಯಿಮಗಳಿಬ್ಬರೂ ಕೈಹಿಡಿದುಕೊಂಡು ಸಿಧಾನವಾಗಿ ತೆರಳುವರು.)

ತೆರೆ

## ದೃಶ್ಯ ೫

[ ಶೀಷ್‌ಮಹಲಿನಲ್ಲಿ ಬೆಲೆಬಾಳುವ ವಸ್ತುಗಳಿಂದಲಂಕೃತವಾದೊಂದು ಸುಂದರ ಮಂದಿರ. ಒಂದೆರಡು ದೀವಿಗೆಗಳ ಮಂದಪ್ರಕಾಶ. ಮಧ್ಯೆ ಮಖ ಮಲ್ಲಿನ ಮೆತ್ತನೆಯ ಗಾದಿಯಮೇಲೆ ದಿಂಬಿಗೊರಗಿ ಯಾವುದೋ ಫಾರಸೀ ಗ್ರಂಥವನ್ನೋದುತ್ತ ನೂರ್‌ಜಹಾನಳು ಕುಳಿತಿದ್ದಾಳೆ... ...ಜುಲೇಖೆಯು ಪ್ರವೇಶಿಸಿ ನೂರ್‌ಜಹಾನಳ ಮುಖಮುದ್ರೆಯಲ್ಲಿ ಹಿಂದೆಂದೂ ಇರದಿದ್ದ ಕಾಠಿಣ್ಯವನ್ನು ಕಂಡು, ತಾನು ಎಂದಿನಂತೆ ಬಳಿಯಲ್ಲಿ ತಟ್ಟನೆ ಕುಳಿತುಕೊಳ್ಳದೆ ಯೋಚನಾಮಗ್ನಳಾಗುವಳು. ]

**ನೂರ್‌ಜಹಾನ್**—(ಗಂಭೀರವಾಗಿ) ....ಜುಲೇಖಾ !....ಶುಷ್ಕ ವಚನಗಳಾಡುವುದು ನನ್ನ ರೀತಿಯಲ್ಲವೆಂದು ನಿನಗೆ ಗೊತ್ತಿದೆ. ಕಳೆದ ೨೦ ವರ್ಷಗಳಿಂದಲೂ ನಿನ್ನನ್ನು ಒಡಹುಟ್ಟಿದ ತಂಗಿಯನ್ನು ಪ್ರೀತಿಸುವುದಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತ ಬಂದೆ....ಮೊದಲು ನಿನ್ನನ್ನು ಬದ್ವಾನಿನಲ್ಲಿ ಕಂಡಾಗಿನಿಂದ ಇದುವರೆಗೂ ನನ್ನ ಪ್ರೀತಿಯು ಕುಗ್ಗಲಿಲ್ಲ. ನಿನ್ನನ್ನೀರೀತಿ ಹೃದಯಾರ ಪ್ರೀತಿಸಿದುದಕ್ಕೆ ನೀನು ತಕ್ಕ ಪ್ರತಿಫಲಕೊಟ್ಟೆ.

[ ಜುಲೇಖೆಯು "ಬಾದಷಾಹ್ ಬೇಗಂ" ಎಂದು ನೂರ್‌ಜಹಾನಳ ಬಳಿ ಕುಳಿತುಕೊಳ್ಳಲು ಮುಂದೆ ಹೆಜ್ಜೆ ಇಟ್ಟೊಡನೆ....ನೂರ್‌ಜಹಾನಳು ಕ್ರೂರ ದೃಷ್ಟಿಯನ್ನು ಬೀರಿ, ಕೈಸನ್ನೆಯಿಂದ ದೂರದಲ್ಲೇ ನಿಲ್ಲುವಂತೆ ಸೂಚಿಸಲು, ಜುಲೇಖೆಯು ಮನನೊಂದು ತಲೆಬಾಗಿ ನಿಲ್ಲುವಳು. ]

**ನೂರ್**—ಇಷ್ಟು ದಿನವೂ ನನ್ನ ಮಡಿಲಲ್ಲಿ ವಿಷಪೂರಿತ ಸರ್ಪವನ್ನು ಸಾಕುತ್ತಿದ್ದೆನೆಂದು ಈಗ ಮನಗಂಡೆ......

**ಜುಲೇಖಾ**—(ಜುಲೇಖೆಯು ಮಾತನಾಡಲೆತ್ನಿಸಲು, ಅವಳಿಗವಕಾಶ ಕೊಡದೆ) ....ಇಷ್ಟು ಕಾಲವೂ ನೀನು ಮೊಗಲ ಸಾಮ್ರಾಜ್ಯವನ್ನು ನೆಲಸಮ ಮಾಡಲು ರಹಸ್ಯವಾಗಿ ಒಳಸಂಚು ನಡೆ

ಸುತ್ತಿದ್ದೆ....ಮೊಗಲ ಸಮ್ರಾಟನ ಸ್ಥಾನದಲ್ಲಿ ನಿನ್ನಳಿಯ ಕರ್ಣಸಿಂಹನನ್ನು ಕೂಡಿಸಲು ಹಗಲಿರುಳೂ ಶ್ರಮಿಸುತ್ತಿರುವೆ....ನಮ್ಮಲ್ಲೇ ನೆಲಸಿ ನಮ್ಮ ತಳಹದಿಯನ್ನೇ ಸಡಲಿಸಲು ಇಷ್ಟು ಕಾಲದಿಂದಲೂ ನೀನು ಬೇಸರವಿಲ್ಲದೆ ಕಾರಸ್ಥಾನ ನಡೆಸುತ್ತಿದ್ದ ನಿನ್ನ ಗುಂಡಿಗೆಯನ್ನು ಮೆಚ್ಚಿಕೊಳ್ಳಬೇಕಾಗಿದೆ....(ಮತ್ತೆ ಜುಲೇಖೆಯು ನಡುಗುವ ದನಿಯಲ್ಲಿ)

**ಜುಲೇಖಾ**---ಬಾದಷಾಹ ಬೇಗಂ....

**ನೂರ್**—ಸಾಕು—ನುಡಿಯದಿರು—ನಾಯಿ....ಷಹಜಾದಾ ಖುಸ್ರುವನ್ನು ಕೊಲ್ಲಿಸಿದೆ.........ಈಗಾಗಲೇ ಖುರುಮನೂ, ಪರ್ವೀಜನೂ ನಿನ್ನವರ ಖಡ್ಗಕ್ಕೆ ತುತ್ತಾಗಿರುವರೋ ಏನೋ.... ನನಗಿನ್ನೂ ಅವರ ಸುದ್ದಿ ಮುಟ್ಟಿಲ್ಲ....

**ಜುಲೇಖಾ**—ಸಾಮ್ರಾಜ್ಞಿ........ನನ್ನನ್ನಿಷ್ಟು ಪ್ರೀತಿಯಿಂದ ತಾವು ಕಾಣುವುದನ್ನು ಸಹಿಸಲಾರದ ದುಷ್ಟರು ತಮಗೀ ಬಗೆಯ ಸುಳ್ಳು ಸುದ್ದಿಗಳನ್ನು ತಂದೊಪ್ಪಿಸಿದ್ದಾರೆ....ತಾವು ನನ್ನನ್ನು ತಂಗಿಗಿಂತಲೂ ಹೆಚ್ಚೆಂದು ಭಾವಿಸಿ ಪ್ರೀತಿಸುತ್ತಿರುವುದಕ್ಕೆ ನಾನು ಚಿರಋಣಿ....ತಮ್ಮ ಈ ವಿಶ್ವಾಸ—ಮೈತ್ರಿಯಿಲ್ಲದಿದ್ದರೆ ನನ್ನ ಪತಿಯು ಹೋದಂದೇ ನಾನೂ ಅವರನ್ನು ಹಿಂಬಾಲಿಸುತ್ತಿದ್ದೆ....ಹೀಗಿರುವಾಗ ನಾನು ಯಾವ ದುರಾಶೆಗಾಗಿ ಒಳಸಂಚು ನಡೆಸಬೇಕು ?

**ನೂರ್**—(ಕೋಪಗೊಂಡು)....ಯಾವ ಆಸೆಗೆ ? ರಾಣಾಕರ್ಣಸಿಂಹನನ್ನು ಭಾರತದ ಸಮ್ರಾಟನನ್ನಾಗಿ ಮಾಡಿ ನೀನು ಸಾಮ್ರಾಜ್ಞಿಯ ಮಾತೆ—ಮಾಹಾಮಾತೆಯಾಗುವಾಸೆಗೆ.... ವೃದ್ಧ ನರಹರಿರಾಯನು ನಿನ್ನ ಮಗಳು ಲಲಿತೆಯನ್ನು ಕರ್ಣಸಿಂಹನಿಗೆ ವಿವಾಹಮಾಡಿ ಕೊಟ್ಟಿರುವುದು ಸತ್ಯವಲ್ಲವೇ ?

ಇನ್ನೂ ಹೇಳಬೇಕೇನು ?.... ಕೇಳು.... ಬದ್ವಾರ್ನಿನಲ್ಲಿ ನಮ್ಮ ವರು ನಿಮಗೆ ಮಾಡಿದ ಚಿತ್ರಹಿಂಸೆಗಳ ಸೇಡು ತೀರಿಸಿ ಕೊಳ್ಳಲು ಹವಣಿಸುತ್ತಿರುವೆ.... ನನಗೆ ಸಾಕಷ್ಟು ಈಗ ಸಾಕ್ಷ್ಯಗಳು ಒದಗಿವೆ.... ಇದುವರೆಗೆ ಯಾರೇನು ಹೇಳಿದರೂ ನಿನ್ನ ಮೇಲಿನ ಪ್ರೇಮದಿಂದ ಅದನ್ನು ಅಸಡ್ಡೆಮಾಡಿದೆ.... (ಪಕ್ಕಕ್ಕೆ ತಿರುಗಿ) ಯಾರಲ್ಲಿ 'ಜೊಲ್ಲಾದ್'............(ಇಬ್ಬರು ಬಿಚ್ಚುಗತ್ತಿ ಹಿಡಿದ ನೀಗ್ರೊ ಗುಲಾಮರು ಓಡಿಬಂದು ತಲೆ ಬಾಗುವರು.)

**ಜುಲೇಖಾ**—(ಗಂಭೀರವಾಗಿ) .... ಬಾದಷಾಹ ಬೇಗಂ.... ತಮ್ಮ ದುರ್ಭಿನಲ್ಲಿ ವೃಥಾ ವಾದಿಸುವುದರಿಂದೇನೂ ಆಗದು.... ಅಪ್ಪಣೆಯಾಗಲಿ.... ಈ ಬಾಂದಿಗೇನು ಶಿಕ್ಷೆ ?

**ನೂರ್**—ನಿನ್ನ ವಿಶ್ವಾಸಘಾತಕತನಕ್ಕೆ ನಿನ್ನ ತಲೆ ತೆಗೆಸುವೆನು.... (ಸೇವಕರಿಗೆ ಸನ್ನೆಮಾಡುವಳು.)

[ ಅವರು ಜುಲೇಖೆಯನ್ನು ಹಿಡಿದೊಯ್ಯಲು ಮುಂದೆ ಬರಲು ಜುಲೇಖೆಯು ತಟ್ಟನೆ ತನ್ನ ಕೈಲಿದ್ದ ನೂರ್‌ಜಹಾನಳ ಮುದ್ರೆಯುಂಗುರವನು ಮುಂದೆ ಹಿಡಿದು ಅವರಿಗೆ ದೂರವಿರುವಂತೆ ಸನ್ನೆಮಾಡುವಳು. ಅವರು ತಲೆ ಬಾಗಿ ದೂರಸರಿಯುವರು. ನೂರ್‌ಜಹಾನಳಿದನ್ನು ಕಂಡು ಮತ್ತೆ ಅವರನ್ನು ಕೂಗುವ ಮುಂಚೆಯೇ ಜುಲೇಖೆಯು ಮಿಂಚಿನಂತೆ ಹಾರಿ, ತನ್ನ ಗುಪ್ತ ಕಠಾರಿಯನ್ನು ನೂರ್‌ಜಹಾನಳ ಹೃದಯದಮೇಲೆ ಒತ್ತಿಹಿಡಿದು]

**ಜುಲೇಖಾ**—ನೋಡಿದೆಯಾ ಸಮ್ರಾಜ್ಞಿ.... ಈಗೊಂದು ಕ್ಷಣಕ್ಕೆ ಹಿಂದೆ ನನ್ನ ಅಳಿವೂ-ಉಳಿವೂ ನಿನ್ನ ಕೈಲಿದ್ದಿತು.... ಈಗ ಎಲ್ಲವೂ ಬದಲಾಯಿತಲ್ಲವೆ.... ನೀನೀಗ ಸೇವಕರನ್ನು ಕೂಗುವುದರೊಳಗೆ ನಿನ್ನನ್ನು ತೀರಿಸಬಲ್ಲೆ.... ಆದರೆ ನನಗೆ ಆ ಇಚ್ಛೆಯಿಲ್ಲ.... ದೇಶದಲ್ಲಿ ದಬ್ಬಾಳಿಕೆಯಿರಲು ನನ್ನ ಸಾವಿನಿಂದ ಸ್ವಾತಂತ್ರ್ಯ ಸಂಗ್ರಾಮದ ಜ್ಯೋತಿ ನಂದದು........ ನೀನು ನನ್ನ ಸಾವನ್ನು ಬಯಸಿದೆ.... ಸಾವನ್ನು ನಾನೇ

ಅಪ್ಪುವೆನು....ನಿನ್ನವರ ಖಡ್ಗದಿಂದಲ್ಲ....ನನ್ನಲ್ಲಿರುವ ವಿಷ ಪಾನದಿಂದ....(ಎಂದು ತನ್ನೆಡಗೈ ಉಂಗುರದಲ್ಲಡಗಿದ್ದ ವಿಷ ವನ್ನು ಹೀರಿ)....ಕಂಡೆಯಾ....ನೀನೂ ನನ್ನನ್ನು ಹಿಂಬಾಲಿ ಸುವಂತೆ ಮಾಡಬಲ್ಲೆ....ಆದರೆ ನೂರ್‌ಜಹಾನಳ ವೇಷದ ಹಿಂದೆ ನನ್ನ ಮೆಹರಳಿದ್ದಾಳೆ. ಆದಕ್ಕಾಗಿ ನಿನ್ನನ್ನು ಕೊಲ್ಲಲು ಕೈಬಾರದು....(ಕಠಾರಿಯನ್ನು ಬದಿಗೆಸೆದು) ........ ಮೆಹರ್........ಒಮ್ಮೆ ಹಿಂದಿನಂತಾಗಲಾರೆಯಾ ?........ ಸಮ್ರಾಜ್ಞಿಯ ಪದವಿಯು ನಿನ್ನ ಹೃದಯವನ್ನೂ ಕಲ್ಲು ಮಾಡಲವಕಾಶಕೊಡದಿರು....(ತಲೆ ಸುತ್ತಿ ಬಂದಂತಾಗಲು, ಗಾದಿಯಮೇಲೆ ಕುಸಿದುಬಿದ್ದು, ಮೆಲ್ಲನೆ ನೂರ್‌ಜಹಾನಳ ಕೈ ಹಿಡಿದುಕೊಂಡು)....ಮೆಹರ್ !....ನನ್ನ ದೇಹದ ದಹನ ವಿಧಿ ಗಳನ್ನು ಹಿಂದೂಧರ್ಮ ರೀತ್ಯಾ ಮಾಡಿಸು....ಮೆಹರ್.... ಮೆಹರ್....

[ನೂರ್‌ಜಹಾನಳು ಸ್ತಂಭಿತಳಾಗಿರುವಳು. ಜುಲೇಖೆಯು ಕಣ್ಣು ಕಪ್ಪಿ ಡುವುದು....“ಮೆ....ಹ....ರ್” ಎನ್ನುತ್ತ ಗಾದಿಯ ಕೆಳಗುರುಳಿ ನಿಶ್ಚೇಷ್ಟಿತ ಳಾಗಿ ಬೀಳುವಳು. ಆಗ ಎಚ್ಚತ್ತ ನೂರ್‌ಜಹಾನಳು ಮೆಲ್ಲನೆ ಗಾದಿಯಿಂದಿ ಳಿದು ಜುಲೇಖೆಯ ದೇಹವನ್ನಪ್ಪಿ ಕುಳಿತು, ಅವಳ ತಲೆಯನ್ನು ತನ್ನ ತೊಡೆ ಯ ಮೇಲಿರಿಸಿಕೊಂಡು........“ಸರ್ವಸುಂದರಿ”........ಎನ್ನುತ್ತ ಜುಲೇಖೆಯ ಹಣೆಗೆ ಮುತ್ತಿಡುವಳು—ಕಂಬನಿಗಳೆರಡು ಸರಿದು ಸರ್ವಸುಂದರಿಯ ಹಣೆಯಮೇಲೆ ಬೀಳುವುವು.]

**ನೂರ್**—ಕ್ಷಮಿಸು, ಗೆಳತಿ ! ನಿನ್ನ ಮೆಹರಳೇ ನಾನು ; ಆದರೆ.... ನೂರ್‌ಜಹಾನಳ ಸ್ವಾರ್ಥಕ್ಕೆ ನೀನು ಬಲಿಯಾಗದೆ ಬೇರೆ ದಾರಿಯೇ ಇರಲಿಲ್ಲ !........”

ತೆ ರೆ.

## ದೃಶ್ಯ ೬

[ಉದಯಪುರದರಮನೆಯಲ್ಲಿ ಒಂದೆಡೆ. ಕೆಲದಿನಾನಂತರ. ಕಿಟಕಿಯಿಂದಾಚೆ ಶೂನ್ಯವನ್ನೀಕ್ಷಿಸುತ್ತ ಶೋಕಪೂರಿತ ಗೀತೆಯೊಂದನ್ನು ಹಾಡುತ್ತ ರಾಣಿ ಲಲಿತ ಕುಮಾರಿಯು ಗೋಡೆಗೊರಗಿ ನಿಂತು, ಕಣ್ಣೀರಿಡುತ್ತ ಮೈಮರೆತಿದ್ದಾಳೆ....ರಾಣಾ ಕರ್ಣಸಿಂಹರೂ, ವೃದ್ಧ ನರಹರಿರಾಯನೂ ಕೈಲೊಂದು ಪಾರಿವಾಳವನ್ನು ಹಿಡಿದುಕೊಂಡು ಪ್ರವೇಶಿಸುವರು. ನರಹರಿರಾಯನು ಅದರ ಕಾಲಿಗೆ ಕಟ್ಟಿದ್ದ ಪತ್ರವನ್ನು ಬಿಚ್ಚಿಕೊಂಡು ನೋಡಿ:-]

**ವೃದ್ಧ**—ರಾಣಾಜಿ!........ನೂರ್‌ಜಹಾನಳು ಮುಂಚಿತವಾಗಿ ಸೈನ್ಯದೊಂದಿಗೆ ಬೆಹಾತ್ ನದಿಯ ಸೇತುವೆಯನ್ನು ದಾಟಿದ್ದುದರಿಂದ ಅವಳನ್ನು ಸೆರೆಹಿಡಿಯಲವಕಾಶವಾಗಲಿಲ್ಲವೆಂದೂ, ಬಾದಷಹನು ಸೆರೆಯೊಳಾದನೆಂದೂ, ಬಾದಷಹನನ್ನು ಸೆರೆಯಿಂದ ತಪ್ಪಿಸಲು ನೂರ್‌ಜಹಾನಳು ಮಹಬತ್ ಖಾನನ ಸೈನ್ಯದೊಂದಿಗೆ ಯುದ್ಧ ಹೂಡಲೆತ್ನಿಸುತ್ತಿರುವಳೆಂದೂ ಭೀಮಸಿಂಹರು ತಿಳುಹುತ್ತಾರೆ....

**ಕರ್ಣಸಿಂಹ**—ಸರ್ವಸುಂದರಿಯು ಜೀವಂತಳಾಗಿದ್ದಿದ್ದರೆ? (ನಿಟ್ಟುಸಿರಿಟ್ಟು) ಈಗಲೂ ಸ್ವಾತಂತ್ರ್ಯಸಂಗ್ರಾಮದ ಜ್ಯೋತಿಯು ನಂದಲು ಅವಳ ಜೀವಜ್ಯೋತಿಯಾದರೂ ಬಿಟ್ಟೀತೆ ?

[ಹಿಂದಿನಿಂದ ಮತ್ತೆ ರಾಣಿ ಲಲಿತಳ ಶೋಕ ಗೀತೆಯು ಮುಂದುವರಿಯುವುದು. ಕರ್ಣಸಿಂಹ-ವೃದ್ಧರು ಒಬ್ಬರ ಮುಖವನ್ನೊಬ್ಬರು ನೋಡುವರು. ವೃದ್ಧನು ನಿಟ್ಟುಸಿರಿಟ್ಟು ತಲೆತಗ್ಗಿಸುವನು. ರಾಣಾ ಕರ್ಣಸಿಂಹನು ಮೆಲ್ಲನೆ ಹೋಗಿ ರಾಣಿಯ ಭುಜದ ಮೇಲೆ ಕೈಯಿರಿಸಿ, ತಾನೂ ಗೀತೆಗೆ ಗಮನ ಕೊಟ್ಟು ನಿಲ್ಲುವನು.

**ಕೊನೆಯ ತೆರೆ.**

---